# ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧ

(ಚಂದ್ರಗಿರಿ ತೀರದಲ್ಲಿ, ಸಹನಾ ಹಾಗೂ ವಜ್ರಗಳು ಕೃತಿಗಳನ್ನು ಅನುಲಕ್ಷಿಸಿ)

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸುತ್ತಿರುವ ಸಂಪ್ರಬಂಧ

2011–2012


**ಸಂಶೋಧನಾ ವಿದ್ಯಾರ್ಥಿ**

ಶ್ವೇತ ಜೆ.
ಎಂ.ಫಿಲ್ ವಿದ್ಯಾರ್ಥಿ
ರಿ. ನಂ: KVMBKS-00535

**ಮಾರ್ಗದರ್ಶಕರು**

ಡಾ. ಶೀಲಾದೇವಿ ಎಸ್. ಮಳೀಮಠ
ಕನ್ನಡ ಸಹ ಪ್ರಾಧ್ಯಾಪಕರು
ಬಿ.ಎಂ.ಎಸ್ ಮಹಿಳಾ ಮಹಾವಿದ್ಯಾಲಯ
ಬಸವನಗುಡಿ, ಬೆಂಗಳೂರು–04.





**ಅಧ್ಯಯನ ಸಂಸ್ಥೆ**

(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)
ಕಾವ್ಯಮಂಡಲ
ನಂ. 13/85, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು – 560 004.

# ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧ

(ಚಂದ್ರಗಿರಿ ತೀರದಲ್ಲಿ, ಸಹನಾ ಹಾಗೂ ವಜ್ರಗಳು ಕೃತಿಗಳನ್ನು ಅನುಲಕ್ಷಿಸಿ)

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಸಲ್ಲಿಸುತ್ತಿರುವ ಸಂಪ್ರಬಂಧ

**2011–2012**


## ಸಂಶೋಧನಾ ವಿದ್ಯಾರ್ಥಿ

**ಶ್ವೇತ ಜೆ.**

ಎಂ.ಫಿಲ್ ವಿದ್ಯಾರ್ಥಿ

ರಿ. ನಂ: KVMBKS-00535

## ಮಾರ್ಗದರ್ಶಕರು

**ಡಾ. ಶೀಲಾದೇವಿ ಎಸ್. ಮಳೀಮಠ**

ಕನ್ನಡ ಸಹ ಪ್ರಾಧ್ಯಾಪಕರು

ಬಿ.ಎಂ.ಎಸ್ ಮಹಿಳಾ ಮಹಾವಿದ್ಯಾಲಯ

ಬಸವನಗುಡಿ, ಬೆಂಗಳೂರು-04.

## ಅಧ್ಯಯನ ಸಂಸ್ಥೆ

(ಹಂಪಿ ಕನ್ನಡ ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ)

**ಕಾವ್ಯಮಂಡಲ**

ನಂ. 13/85, ರಾಷ್ಟ್ರೀಯ ವಿದ್ಯಾಲಯ ರಸ್ತೆ,

ಬಸವನಗುಡಿ, ಬೆಂಗಳೂರು – 560 004.

# ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ **"ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧ"** ಎಂಬ ಶೀರ್ಷಿಕೆಯ ಈ ಎಂ.ಫಿಲ್ ಸಂಪ್ರಬಂಧವನ್ನು **ಡಾ. ಶೀಲಾದೇವಿ ಎಸ್ ಮಳೀಮಠ**, ಸಹ ಪ್ರಾಧ್ಯಾಪಕರು ಕನ್ನಡ ವಿಭಾಗ, ಬಿ.ಎಂ.ಎಸ್ ಮಹಿಳಾ ಮಹಾವಿದ್ಯಾಲಯ ಬಸವನಗುಡಿ, ಬೆಂಗಳೂರು ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ.

ಪ್ರಸ್ತುತ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾಲಯದ ಪದವಿ ಅಥವಾ ಇತರೆ ಉದ್ದೇಶಗಳಿಗಾಗಲಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**ಸಂಶೋಧನಾ ವಿದ್ಯಾರ್ಥಿ**

ಶ್ವೇತ. ಜೆ

ಶ್ವೇತ.ಜೆ

ದಿನಾಂಕ : ೨೧-೦೬-೨೦೧೨

ಸ್ಥಳ : ಬೆಂಗಳೂರು

# ದೃಢೀಕರಣ ಪತ್ರ

ಶ್ವೇತ.ಜೆ ಇವರು "ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧ" ಎಂಬ ಶೀರ್ಷಿಕೆಯ ಈ ಎಂ.ಫಿಲ್ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸ್ವತಂತ್ರ ಅಧ್ಯಯನದ ಮೂಲಕ ಸಿದ್ಧಪಡಿಸಿರುತ್ತಾರೆ. ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಈ ಮೊದಲು ವಿಶ್ವವಿದ್ಯಾಲಯದ, ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಶೀ ಮಳೀ ಮಠ

**ಮಾರ್ಗದರ್ಶಕರು**

**ಡಾ. ಶೀಲಾದೇವಿ ಎಸ್.ಮಳೀಮಠ**
ಕನ್ನಡ ಸಹ ಪ್ರಾಧ್ಯಾಪಕರು
ಬಿ.ಎಂ.ಎಸ್ ಮಹಿಳಾ ಮಹಾವಿದ್ಯಾಲಯ
ಬಸವನಗುಡಿ,. ಬೆಂಗಳೂರು-04

ದಿನಾಂಕ : 29-06-2012

ಸ್ಥಳ : ಬೆಂಗಳೂರು

# ಪರಿವಿಡಿ

ಪೀಠಿಕೆ

ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ 1–5

ಅಧ್ಯಾಯ–1 : ಧಾರ್ಮಿಕ ನಂಬಿಕೆಗಳು ಮತ್ತು ಮುಸ್ಲಿಂ ಸಮುದಾಯ 6–21

1. ಮೂಢನಂಬಿಕೆ
2. ಬುರ್ಕಾ ಪದ್ಧತಿ
3. ಸಿನಿಮಾ ನಿರ್ಬಂಧ
4. ಸಂತಾನಹರಣ ಚಿಕಿತ್ಸೆ ನಿಷೇಧ

ಅಧ್ಯಾಯ–2 : ಗಂಡಿನ ಯಾಜಮಾನ್ಯದ ನೆಲೆಗಳು 22–39

1. ಲಿಂಗ ತಾರತಮ್ಯ
2. ಲೈಂಗಿಕ ರಾಜಕಾರಣ
3. ಅಧಿಕಾರದ ಪ್ರತಿಷ್ಠಾಪನೆ
4. ಹೆಣ್ಣಿನ ಚಲನ ವಲನಗಳ ಮೇಲಿನ ನಿಯಂತ್ರಣ

ಅಧ್ಯಾಯ–3 : ಹೆಣ್ಣು : ಪರಂಪರೆ ಮತ್ತು ಆಧುನಿಕತೆ 40–58

1. ಕೌಟುಂಬಿಕ ಚೌಕಟ್ಟು
2. ಆರ್ಥಿಕ ಸ್ಥಿತಿಗತಿ
3. ಹೆಣ್ಣಿನ ಮೌನ ಪ್ರತಿಭಟನೆ
4. ಸ್ತ್ರೀ ಶಿಕ್ಷಣ

ಅಧ್ಯಾಯ–4 : ಇಸ್ಲಾಂ ಧರ್ಮದ ಮದುವೆ ಕಲ್ಪನೆ 59–73

1. ಬಾಲ್ಯವಿವಾಹ
2. ವರದಕ್ಷಿಣೆ
3. ಬಹುಪತ್ನಿತ್ವ
4. ತಲಾಖ್
5. ಪುನರ್ ವಿವಾಹ

ಅಧ್ಯಾಯ–5 : ಸಾರಾ ಅಬೂಬಕ್ಕರ್‌ರೊಂದಿಗಿನ ಸಂವಾದ 74–83

ಅನುಬಂಧ (ಭಾವಚಿತ್ರ) 84–86

ಸಮಾರೋಪ 87–89

ಪರಾಮರ್ಶನ ಗ್ರಂಥಗಳು 90–93

**ಪೀಠಿಕೆ :**

ಕನ್ನಡ ಸಾಹಿತ್ಯಕ್ಕೆ ವಿವಿಧ ಧರ್ಮಗಳು ನೀಡಿದ ಕೊಡುಗೆಗಳನ್ನು ಗಮನದಲ್ಲಿಟ್ಟುಕೊಂಡು ವೀರಶೈವ ಧರ್ಮ, ಜೈನ ಧರ್ಮ, ಇಸ್ಲಾಂ ಧರ್ಮ, ಕ್ರಿಶ್ಚಿಯನ್ ಧರ್ಮ, ಬೌದ್ಧ ಧರ್ಮ ಹೀಗೆ ಕೆಲವು ಧರ್ಮಗಳು ಕನ್ನಡ ಸಾಹಿತ್ಯದಲ್ಲಿ ಪ್ರತಿಪಾದಿಸುವ ಮೌಲ್ಯ ಪ್ರಜ್ಞೆಯನ್ನು ಕುರಿತ ಅಧ್ಯಯನಗಳು ನಡೆದಿವೆ. ಯಹೂದಿಯರ ಸಾಂಪ್ರದಾಯಿಕ ಜಡತ್ವ, ಅವೈಜ್ಞಾನಿಕತೆ, ಮೂಢನಂಬಿಕೆ, ಬಹುದೇವತಾರಾಧನೆ, ಅರೇಬಿಯನ್ ಬುಡಕಟ್ಟುಗಳ ಒಳಜಗಳ, ಕ್ರಿಶ್ಚಿಯನ್ನರ ಮತಾಂಧತೆ, ಮ್ಯಾಗಿಯನ್ನರ ಅತಿಮಾನುಷತೆ ಹಾಗೂ ಕ್ಯಾಥೋಲಿಕ್ ಚರ್ಚ್‌ಗಳ ಕಂದಾಚಾರಗಳಿಂದ ನೊಂದಿದ್ದ ಸುಮಾರು ಕ್ರಿಸ್ತಶಕ 7ನೇ ಶತಮಾನದ ಜನರಿಗೆ ಇಸ್ಲಾಂ ಒಂದು ದಿವ್ಯ ಔಷಧಿಯಾಗಿ ಪರಿಣಮಿಸಿತ್ತು. ಬಹುದೇವತಾರಾಧನೆ, ಜಡತ್ವ ಸಂಪ್ರದಾಯಕತ್ವಗಳ ವಿರುದ್ಧ ಹುಟ್ಟಿದ ಕ್ರಾಂತಿಕಾರಕ ಧರ್ಮವೇ ಇಸ್ಲಾಂ. ಏಕದೇವೋಪಾಸನೆ ಈ ಧರ್ಮದ ವೈಶಿಷ್ಟ್ಯವಾಗಿದೆ. ಕರ್ನಾಟಕದ ಸಂಸ್ಕೃತಿಯಲ್ಲಿ ಅನೇಕ ಧರ್ಮಗಳು ಸೇರಿಕೊಂಡಿವೆ. ಇತರೆ ಧರ್ಮಗಳಂತೆ ಇಸ್ಲಾಂ ಧರ್ಮವೂ ಕರ್ನಾಟಕದ ಸಾಂಸ್ಕೃತಿಕ ಲೋಕದಲ್ಲಿ ಬೆರೆತಿದೆ. ಬಹು ಭಾಷೆ, ಬಹು ಧರ್ಮ, ಬಹು ದೈವ, ಬಹು ನಂಬಿಕೆಗಳ ಕರ್ನಾಟಕದಲ್ಲಿ ಇಸ್ಲಾಂ ವಿಶಿಷ್ಟ ಅಸ್ತಿತ್ವ ಪಡೆದಿದೆ.

ಈ ಇಸ್ಲಾಂ ಧರ್ಮದಲ್ಲಿ ಇರುವಂತಹ ಕಟ್ಟುಪಾಡುಗಳು ಗಂಡು – ಹೆಣ್ಣಿನ ಸಂಬಂಧದ ವಿಭಿನ್ನ ಮುಖಗಳನ್ನು ಪ್ರಭಾವಿಸುತ್ತಾ ಬಂದಿದೆ. ಗಂಡು ಹೆಣ್ಣಿನ ಸಂಬಂಧ ಸಾಮಾಜಿಕವೂ ಹೌದು, ವೈಯಕ್ತಿಕವೂ ಹೌದು. ಇದು ಮನುಷ್ಯನ ಅತ್ಯಂತ ಮೂಲಭೂತವಾದ ಸಂಬಂಧಗಳಲ್ಲಿ ಒಂದು. ಹಾಗಾಗಿ ಈ ಸಂಬಂಧಗಳನ್ನು ಕುರಿತು ನಾವು ತೆಗೆದುಕೊಳ್ಳುವಂತಹ ನಿಲುವುಗಳು ಒಂದು ಧರ್ಮ, ಪರಂಪರೆ, ಸಂಸ್ಕೃತಿ ಹಾಗೂ ಸಮಾಜಗಳನ್ನು ಕುರಿತು ತೆಗೆದುಕೊಳ್ಳುವ ನಿಲುವುಗಳೇ ಆಗಿಬಿಡಬಹುದಾಗಿದೆ. ಏಕೆಂದರೆ ಜಮೀನುದಾರಿ ಸಾಮಾಜಿಕ ವ್ಯವಸ್ಥೆ ಇದ್ದ ಸಂದರ್ಭದಲ್ಲಿ ಗಂಡು–ಹೆಣ್ಣಿನ ಸಂಬಂಧವೆನ್ನುವುದು ಸರಳ ಮಾದರಿಯಲ್ಲಿದ್ದು, ವಸಾಹತುಶಾಹಿ ಅನುಭವದ ನಂತರ ಗಂಡು–ಹೆಣ್ಣಿನ ಸಂಬಂಧಗಳ ಮಾದರಿಗಳು ಬದಲಾದವು. ಜಮೀನುದಾರಿ ಪದ್ಧತಿಯಲ್ಲಿ ಹೆಣ್ಣಿನ ವ್ಯಕ್ತಿತ್ವವು ಮನೆಯೊಳಗಿನ ಅಂಶಕ್ಕೆ ಸೀಮಿತವಾದರೆ, ಆಧುನಿಕ ಸಾಮಾಜಿಕ ವ್ಯವಸ್ಥೆಯಲ್ಲಿ ಹೆಣ್ಣಿಗೆ ಮನೆಯೊಳಗಿನ ವ್ಯಕ್ತಿತ್ವ ಮಾತ್ರವೇ ಅಲ್ಲ ಹೊರಗಿನ ವ್ಯಕ್ತಿತ್ವವೂ ಮುಖ್ಯವಾಗಿತ್ತು. ಕಾರಣ ದುಡಿಮೆ ಮತ್ತು ಉತ್ಪಾದನೆಯ ಸ್ವರೂಪಗಳು ಈ ಸಂದರ್ಭದಲ್ಲಿ ಬದಲಾದವು. ದುಡಿಮೆಯ ಕಲ್ಪನೆಯು ಬದಲಾದಂತೆ ಅದರ ಜೊತೆಗೆ ಮೌಲ್ಯದ ದೃಷ್ಟಿಕೋನವೂ ಬದಲಾಗುತ್ತದೆ ಈ ಅಂಶವನ್ನು 'ಚಂದ್ರಗಿರಿಯ ತೀರದಲ್ಲಿ' ಕಾದಂಬರಿಯ ನಾದಿರಾ ಪಾತ್ರದ ಮೂಲಕ ಗಮನಿಸಬಹುದಾಗಿದೆ.

ಸಾರಾ ಅಬೂಬಕ್ಕರ್ ಅವರು ಮುಸ್ಲಿಂ ಸಮುದಾಯದಿಂದ ಬಂದ ಲೇಖಕಿ. ತಮ್ಮ ಸಮುದಾಯದ ಮಹಿಳೆಯರ ಬದುಕು ಅನುಭವ, ರೀತಿ ನೀತಿಗಳು, ಧಾರ್ಮಿಕ ಆಚರಣೆ, ಸಾಂಸ್ಕೃತಿಕ ಒಳಪದರುಗಳನ್ನು ಅವರು ತಮ್ಮ ಬರಹಗಳಲ್ಲಿ ತೆರೆದಿಟ್ಟರು. ಈ ಒಳಪದರುಗಳನ್ನು ಗಂಡು ಹೆಣ್ಣಿನ ಸಂಬಂಧದ ಮೂಲಕ ಪರಿಶೀಲಿಸಲು ಸಾಧ್ಯವಾಗುತ್ತದೆ. ಮುಸ್ಲಿಂ ಸಮುದಾಯದಲ್ಲಿ ಹೆಣ್ಣು ಮಕ್ಕಳು ಶಿಕ್ಷಣ ಕಲಿಯಬಾರದು, ಬುರ್ಖಾ ಇಲ್ಲದೇ ಹೊರಗೆ ಓಡಾಡಬಾರದು. ಪರಪುರುಷನೊಂದಿಗೆ ಮಾತನಾಡಬಾರದು ಎಂಬಂತಹ ನಿಯಮಗಳು ಬಹುಕಾಲ ಇದ್ದವು. ಹೆಣ್ಣು ಮಕ್ಕಳೆಂದರೆ ಹೀಗೆ ಇರಬೇಕೆಂಬ, ಗಂಡು ಹೇಳಿದ ಹಾಗೆ ಬಾಳಬೇಕೆಂಬ ರೀತಿನೀತಿಗಳು ಗಂಡು ಹೆಣ್ಣಿನ ಮೇಲೆ

ಸಾಮಾಜಿಕವಾಗಿ, ಧಾರ್ಮಿಕವಾಗಿ ಒತ್ತಡಗಳನ್ನು ಹೇರಿರುವುದನ್ನು ಸಾರಾ ಅಬೂಬಕ್ಕರ್ ಅವರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳ ಮೂಲಕ ತಿಳಿಯಬಹುದಾಗಿದೆ.

## ಅಧ್ಯಯನದ ಉದ್ದೇಶ:

ಸಾರಾ ಅಬೂಬಕ್ಕರ್ ತಮ್ಮ "ಚಂದ್ರಗಿರಿಯ ತೀರದಲ್ಲಿ" ಎಂಬ ಕಾದಂಬರಿಯೊಂದಿಗೆ ಕನ್ನಡ ಸಾಹಿತ್ಯ ಲೋಕವನ್ನು ಪ್ರವೇಶಿಸಿದರು. ಮುಸ್ಲಿಂ ಸಮುದಾಯದಲ್ಲಿ ನದಿಯ ತೀರದ ಸುತ್ತಲೂ ನಡೆಯುವಂತಹ ಸಾಮಾಜಿಕ ಬಿಕ್ಕಟ್ಟುಗಳು, ಕುಟುಂಬ ವ್ಯವಸ್ಥೆ, ಮದುವೆ ಕಲ್ಪನೆ, ಬಾಲ್ಯವಿವಾಹ, ಆರ್ಥಿಕ ವ್ಯವಸ್ಥೆ, ಹೆಣ್ಣಿನ ನೋವು-ನಲಿವು, ಗಂಡಿನ ದಬ್ಬಾಳಿಕೆ ಇವೆಲ್ಲವನ್ನೂ ಇವರು ತಮ್ಮ ಕಾದಂಬರಿಯಲ್ಲಿ ಚಿತ್ರಿಸಿರುವುದನ್ನು ಕಾಣಬಹುದಾಗಿದೆ.

ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳನ್ನು ಕುರಿತಂತೆ ಇದುವರೆಗೂ ಹಲವು ಅಧ್ಯಯನಗಳು ನಡೆದಿವೆ. ಅವು ಇಸ್ಲಾಂ ಧರ್ಮಕ್ಕೆ ಸಂಬಂಧಪಟ್ಟ ಹಾಗೆ ಮುಸ್ಲಿಂ ಸಮುದಾಯದ ಜೀವನ ಶೈಲಿ ಹಾಗೂ ಸ್ಥಿತಿಗತಿ ಕುರಿತಂತೆ ನಡೆದಿವೆ. ಮುಸ್ಲಿಂ ಮಹಿಳೆಯರ ಸ್ಥಿತಿಯ ಚಿತ್ರಣದ ಬಗ್ಗೆ ಅಧ್ಯಯನಗಳು ನಡೆದಿವೆ. 'ಲಿಂಗತಾರತಮ್ಯಗಳು', 'ಪುರುಷ ಪ್ರಾಧಾನ್ಯತೆ', 'ಮುಸ್ಲಿಂ ಸಂವೇದನೆ', 'ಮಹಿಳಾ ಸಂವೇದನೆ' ಮೊದಲಾದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಅಂಶಗಳ ಹಿನ್ನೆಲೆಯಲ್ಲಿ ಸಾರಾ ಅಬೂಬಕ್ಕರ್ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳನ್ನು ಕುರಿತ ವಸ್ತು ವಿಷಯವನ್ನು ಪರಿಶೀಲಿಸಲು ಈ ಅಧ್ಯಯನ ಯತ್ನಿಸುತ್ತದೆ.

ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳನ್ನು ಸಾಮಾಜಿಕ ಸಂಬಂಧಗಳನ್ನಾಗಿ ನೋಡಲಾಗಿದೆ. ಈ ಸಂಬಂಧಗಳು ಕೆಲವೊಮ್ಮೆ ಸಾಮಾಜಿಕ ಬಿಕ್ಕಟ್ಟುಗಳಾಗಿ ಪರಿಣಮಿಸುತ್ತದೆ. ಈ ಸಮುದಾಯದಲ್ಲಿ ಗಂಡಿಗೆ ಆಯ್ಕೆಯ ವಿಷಯದಲ್ಲಿ ಅವಕಾಶವನ್ನು ಕಲ್ಪಿಸಲಾಗಿರುತ್ತದೆ. ಆದರೆ ಹೆಣ್ಣಿಗೆ ಆಯ್ಕೆಯಲ್ಲಿ ಅವಕಾಶಗಳು ಇರುವುದಿಲ್ಲ. ಸಾರಾ ಅಬೂಬಕ್ಕರ್‌ರವರ 'ಚಂದ್ರಗಿರಿಯತೀರದಲ್ಲಿ', 'ಸಹನಾ', 'ವಜ್ರಗಳು', ಮೊದಲಾದ ಕಾದಂಬರಿಗಳಲ್ಲಿ ಕಂಡುಬರುವಂತಹ ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ, ಧಾರ್ಮಿಕ ಬಿಕ್ಕಟ್ಟುಗಳು ಧರ್ಮ, ಜಾತಿ, ಸಾಮಾಜಿಕ ಶ್ರೇಣಿಕರಣ ಇವೆಲ್ಲವೂ ಹೇಗೆ ವಿವಾಹವನ್ನು ಅಡ್ಡಿಪಡಿಸುತ್ತವೆ ಹಾಗೂ ಮತೀಯ ಘರ್ಷಣೆ ಹೇಗೆ ಗಂಡು-ಹೆಣ್ಣಿನ ಸಂಬಂಧಕ್ಕೆ ಧಕ್ಕೆ ಉಂಟು ಮಾಡುತ್ತದೆ ಎಂಬುದನ್ನು ಇಲ್ಲಿ ಗ್ರಹಿಸಬಹುದಾಗಿದೆ.

ಮುಸ್ಲಿಂ ಸಮುದಾಯದಲ್ಲಿ ಗಂಡು ಹೆಣ್ಣನ್ನು ನಿಯಂತ್ರಣ ಮಾಡುವುದನ್ನು ಗಮನಿಸುವಾಗ ಇಲ್ಲಿ ಲಿಂಗ ರಾಜಕಾರಣ ಕಂಡುಬರುತ್ತದೆ. ಜೊತೆಗೆ ಲೈಂಗಿಕ ರಾಜಕಾರಣ, ಸ್ತ್ರೀ ಸಂವೇದನೆ, ಸ್ತ್ರೀ-ಪುರುಷರ ನಡುವೆ ಇರುವ ಸ್ಥಾನಮಾನಗಳು, ಸ್ತ್ರೀಯ ಅಸ್ತಿತ್ವದ ಪ್ರಶ್ನೆ, ಒಂಟಿತನ, ಹೆಣ್ಣಿನ ಮನಸ್ಸಿನಲ್ಲಿ ನಡೆಯುವ ತುಡಿತಗಳನ್ನು ಸಾರಾ ಅಬೂಬಕ್ಕರ್ ಅವರ ಕಾದಂಬರಿಗಳು ಮಂಡಿಸುತ್ತವೆ. ಈ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳು ಹೇಗೆ ಸಾಮಾಜಿಕ, ರಾಜಕೀಯ, ಧಾರ್ಮಿಕ, ಸಾಂಸ್ಕೃತಿಕ ಬಿಕ್ಕಟ್ಟುಗಳಿಗೆ ಕಾರಣವಾಗುತ್ತವೆ ಎಂದು ಈ ಅಧ್ಯಯನದಲ್ಲಿ ಪರಿಶೀಲಿಸಲಾಗುತ್ತದೆ. ಸಾರಾ ಅಬೂಬಕ್ಕರ್ ಅವರ ಕಾದಂಬರಿಗಳಲ್ಲಿ ಗಂಡು ಹೆಣ್ಣಿನ ಸಂಬಂಧವು ಮೇಲ್‌ಸ್ತರ ಹಾಗೂ ಕೆಳಸ್ತರಗಳ ಶ್ರೇಣೀಕರಣಗಳಲ್ಲಿ ರೂಪುಗೊಂಡ ಬಗೆಯನ್ನು ಈ ಅಧ್ಯಯನದಲ್ಲಿ ಗುರುತಿಸಲಾಗಿದೆ. ಏಕೆಂದರೆ ಮುಸ್ಲಿಂ ಸಮಾಜದಲ್ಲಿ ಗಂಡಿಗೆ ಸಿಗುವಂತಹ ಸ್ಥಾನಮಾನಗಳು, ಬಹುಪತ್ನಿತ್ವದಂಥ ಅವಕಾಶಗಳು ಹೆಣ್ಣಿಗೆ ಲಭಿಸುವುದಿಲ್ಲ. ಹೆಣ್ಣು ಗಂಡಿನ ಅಧೀನದಲ್ಲಿದ್ದು ಗಂಡು ಹೇಳಿದ ಹಾಗೆ ಬಾಳಿ, ನಂತರ ಗಂಡು ಹೆಣ್ಣಿಗೆ 'ತಲಾಖ್' ಎಂಬ ಮೂರು ಅಕ್ಷರ ಹೇಳಿದ ತಕ್ಷಣ ಹೆಣ್ಣಿನ ಬದುಕು ಯಾವ ಸ್ಥಿತಿಗೆ ತಲುಪುವುದು ಎಂಬುದನ್ನು ಸಾರಾ ಅವರ ಕಾದಂಬರಿಗಳು ಮಂಡಿಸುತ್ತವೆ. ಅಲ್ಲದೆ ಗಂಡಿನಿಂದ ದೂರವಾಗಿ ಸಮಾಜದಲ್ಲಿ ಹೆಣ್ಣು

ಅನುಭವಿಸುವ ತೊಂದರೆಗಳು ಮತ್ತು ತಲಾಖ್ (ವಿಚ್ಛೇದನ)ದ ನಂತರ ಪುನಃ ಅದೇ ಗಂಡನನ್ನು ಮದುವೆಯಾಗಬೇಕಾದರೆ ಹೆಣ್ಣು ಮಾಡಬೇಕಾದಂತಹ ಕಾರ್ಯಗಳನ್ನು ಕುರಿತು ಸಹ ಸಾರಾ ಅವರ ಕಾದಂಬರಿಗಳಲ್ಲಿ ಗಂಡು ಹೆಣ್ಣಿನ ಸಂಬಂಧದ ಮುಖಾಂತರ ಅಧ್ಯಯನವನ್ನು ಮಾಡಲು ತೊಡಗಿರುವೆನು.

## ಅಧ್ಯಯನದ ವ್ಯಾಪ್ತಿ :

ಪ್ರಸ್ತುತ ಅಧ್ಯಯನದಲ್ಲಿ ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಾದ "ಚಂದ್ರಗಿರಿಯ ತೀರದಲ್ಲಿ" (1984), "ಸಹನಾ" (1985), "ವಜ್ರಗಳು" (1988), ಎಂಬಂತಹ ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡು ಅಧ್ಯಯನದಲ್ಲಿ ತೊಡಗಿರುವೆನು.

ಸಾರಾ ಅವರ ಕಾದಂಬರಿಯಲ್ಲಿ ಗಂಡು ಹೆಣ್ಣಿನ ಸಂಬಂಧವನ್ನು ಕುರಿತಂತೆ ಅಧ್ಯಯನಕ್ಕೆ ಇತರ ಕೃತಿಗಳನ್ನು ಪೂರಕವಾಗಿ ತೆಗೆದುಕೊಳ್ಳಲಾಗಿದೆ. ಅವುಗಳೆಂದರೆ ಬೋಳುವಾರು ಮಹಮ್ಮದ್ ಕುಂಞ' ರವರ "ಆಕಾಶಕ್ಕೆ ನೀಲಿ ಪರದೆ", ಸಾರಾರವರ 'ಚಪ್ಪಲಿಗಳು', 'ಸುಳಿಯಲ್ಲಿ ಸಿಕ್ಕವರು' ಕೃತಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈ ಕೃತಿಗಳು ಮುಸ್ಲಿಂ ಸಮುದಾಯದ ಹೆಣ್ಣಿನ ಬದುಕು, ಶ್ರದ್ಧೆ, ಆಚರಣೆ, ಮಾನವೀಯ ಮಿಡಿತಗಳನ್ನು ಒಳಗೊಂಡಿರುವುದನ್ನು ಗುರುತಿಸಬಹುದಾಗಿದೆ. ಆದ್ದರಿಂದ ಈ ಕೃತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಸಾರಾ ಅವರ ಕಾದಂಬರಿಗಳು ವೈವಿಧ್ಯಮಯ ವಸ್ತುವನ್ನು ಹೊಂದಿವೆ. ಆದ್ದರಿಂದ ಅವುಗಳಲ್ಲಿ ಬರುವ ಮುಸ್ಲಿಂ ಸಮುದಾಯದ ಹೆಣ್ಣಿನ ದಮನ, ಪ್ರತಿಭಟನೆ ಮತ್ತು ಪರ್ಯಾಯಗಳ ಹುಡುಕಾಟದ ವಿಧಾನಗಳನ್ನು ಚರ್ಚಿಸಲಾಗಿದೆ. ಅದೇ ಸಂದರ್ಭದಲ್ಲಿ ಅವುಗಳ ಹಿಂದಿರುವ ಚಾರಿತ್ರಿಕ ಒತ್ತಡ ಮತ್ತು ವೈರುಧ್ಯಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಲ್ಲಿ ಗಂಡು - ಹೆಣ್ಣಿನ ಸಂಬಂಧ ಕುರಿತ ಈ ಅಧ್ಯಯನದಲ್ಲಿ ಆರು ಮುಖ್ಯ ಆಯಾಮಗಳನ್ನು ಚರ್ಚೆ ಮಾಡಲಾಗುತ್ತದೆ.

1. ಧಾರ್ಮಿಕ ನಂಬಿಕೆಗಳು ಮತ್ತು ಮುಸ್ಲಿಂ ಸಮುದಾಯ
2. ಗಂಡಿನ ಯಾಜಮಾನ್ಯದ ನೆಲೆಗಳು
3. ಕರಾವಳಿಯ ಜೀವನ ಶೈಲಿ
4. ಹೆಣ್ಣು: ಪರಂಪರೆ ಮತ್ತು ಆಧುನಿಕತೆ
5. ಇಸ್ಲಾಂ ಧರ್ಮದಲ್ಲಿ ಬಹುಪತ್ನಿತ್ವದ ಚಿತ್ರಣ
6. ಸ್ತ್ರೀ ಶೋಷಣೆಯ ಅನಾವರಣ

ಒಟ್ಟಾರೆಯಾಗಿ ಸಾರಾ ಅಬೂಬಕ್ಕರ್ ಆವರ ಕಾದಂಬರಿಗಳಲ್ಲಿ ಗಂಡು-ಹೆಣ್ಣಿನ ಸಂಬಂಧಗಳ ಅಧ್ಯಯನದ ಮೂಲಕ ಮುಸ್ಲಿಂ ಸಮುದಾಯದಲ್ಲಿ ಹೆಣ್ಣು ಹೇಗೆ ಪರಂಪರೆಯ ಧಾರ್ಮಿಕ ನಂಬಿಕೆಯಲ್ಲಿ ನರಳುತ್ತ ತನಗೆ ಗಂಡಿನ ಬಂಧನದಿಂದ ಬಿಡುಗಡೆಯನ್ನು ಪಡೆಯಬೇಕೆಂದು ತುಡಿಯುವ ಮನಸ್ಥಿತಿಯನ್ನು ತಿಳಿಯಬಹುದಾಗಿದೆ. ಗಂಡಿನ ಅಧೀನದಲ್ಲಿ ಹೆಣ್ಣು ಜೀವನವನ್ನು ನಡೆಸುತ್ತಾ ಮೌನವಾಗಿ ಪ್ರತಿಭಟಿಸುವವಳು ಎಂಬುದನ್ನು ಇಲ್ಲಿ ಗುರುತಿಸಬಹುದಾಗಿದೆ. ಇವರ ಒಟ್ಟಾರೆ ಕಾದಂಬರಿಗಳಲ್ಲಿ ಅನಕ್ಷರತೆ, ಲಿಂಗತಾರತಮ್ಯ, ಧಾರ್ಮಿಕ ನಂಬಿಕೆ, ಆರ್ಥಿಕ ಸ್ಥಿತಿಗತಿಗಳನ್ನು ಬಾಲ್ಯ ವಿವಾಹ ಮುಂತಾದ ಅಂಶಗಳಿರುವುದನ್ನು ಅಧ್ಯಯನ ಮಾಡಲಾಗುತ್ತದೆ.

**ಪ್ರಾಥಮಿಕ ಪಠ್ಯಗಳು :**


1. ಸಾರಾ ಅಬೂಬಕ್ಕರ್ : ಚಂದ್ರಗಿರಿಯ ತೀರದಲ್ಲಿ
ಚಂದ್ರಗಿರಿ ಪ್ರಕಾಶನ, ಮಂಗಳೂರು
8ನೇ ಮುದ್ರಣ – 2011

2. ಸಾರಾ ಅಬೂಬಕ್ಕರ್ : ಸಹನಾ
ಪತ್ರಿಕೆ ಪ್ರಕಾಶನ, ಬೆಂಗಳೂರು
1ನೇ ಮುದ್ರಣ – 1985

3. ಸಾರಾ ಅಬೂಬಕ್ಕರ್ : ವಜ್ರಗಳು
ಚಂದ್ರಗಿರಿ ಪ್ರಕಾಶನ, ಮಂಗಳೂರು
3ನೇ ಮುದ್ರಣ – 2009

4. ಸಾರಾ ಅಬೂಬಕ್ಕರ್ : ಕದನ ವಿರಾಮ
ಚಂದ್ರಗಿರಿ ಪ್ರಕಾಶನ, ಮಂಗಳೂರು
2ನೇ ಮುದ್ರಣ – 2009

5. ಸಾರಾ ಅಬೂಬಕ್ಕರ್ : ಪಂಜರ
ಚಂದ್ರಗಿರಿ ಪ್ರಕಾಶನ, ಮಂಗಳೂರು
2ನೇ ಮುದ್ರಣ – 2009

**ಪರಾಮರ್ಶನ ಗ್ರಂಥಗಳು :**

1. ಟಿ.ಪಿ. ಅಶೋಕ : ಕಾರಂತರ ಕಾದಂಬರಿಗಳಲ್ಲಿ ಗಂಡು – ಹೆಣ್ಣು
ಅಕ್ಷರ ಪ್ರಕಾಶನ, ಸಾಗರ, ಕರ್ನಾಟಕ ರಾಜ್ಯ
ಪ್ರಥಮ ಮುದ್ರಣ : 1982

2. ಡಾ: ಸಬೀಹಾ : ಚಂದ್ರಗಿರಿ
ಸಿರಿವರ ಪ್ರಕಾಶನ, ಬೆಂಗಳೂರು
ಪ್ರಥಮ ಮುದ್ರಣ : 2009

3. ನಾಡೋಜ ಡಾ: ಸಾರಾ ಅಬೂಬಕ್ಕರ್ : ಹೊತ್ತು ಕಂತುವ ಮುನ್ನ
ಚಂದ್ರಗಿರಿ ಪ್ರಕಾಶನ
ಪ್ರಥಮ ಮುದ್ರಣ : 2010

4. ಕೆ. ಷರೀಫಾ : ಮುಸ್ಲಿಂ ಮಹಿಳಾ ಸಂವೇದನೆ
ಅಂಕಿತ ಪ್ರಕಾಶನ, ಬೆಂಗಳೂರು

5. ಡಾ. ಗೀತಾ ಪ್ರಸಾದ್ : ಆಧುನಿಕ ಮಹಿಳಾ ಅಭಿವ್ಯಕ್ತಿ

6. ಡಾ. ರಂಗರಾಜ ವನದುರ್ಗ : ಬಂಡಾಯ ಸಾಹಿತ್ಯ ಸಂವೇದನೆ,
ಕನಕ ಸಾಹಿತ್ಯ ಪ್ರತಿಷ್ಠಾನ, ಬೆಂಗಳೂರು
1ನೇ ಮುದ್ರಣ – 2002

## ಅಧ್ಯಾಯ-1

# ಧಾರ್ಮಿಕ ನಂಬಿಕೆಗಳು ಮತ್ತು ಮುಸ್ಲಿಂ ಸಮುದಾಯ

ಹೆಣ್ಣನ್ನು ತನ್ನ ಅಧೀನದಲ್ಲಿ ಇರಿಸಿಕೊಳ್ಳಲು ಪುರುಷ ಪ್ರಧಾನ ವ್ಯವಸ್ಥೆಯು ಪ್ರಧಾನವಾಗಿ ಆಧಾರಿಸುವುದು ಧರ್ಮವನ್ನು ಮತ್ತು ಧಾರ್ಮಿಕ ನಂಬಿಕೆಗಳನ್ನು ತನ್ನ ಅಪೇಕ್ಷೆಯ ಹೆಣ್ಣು - ಹೆಣ್ಣು ವ್ಯಕ್ತಿತ್ವ ಮತ್ತು ಹೆಣ್ಣು ಬದುಕನ್ನು ಈ ಪಿತೃ ಸಂಸ್ಕೃತಿಯು ಧರ್ಮಧಾರಿತ ಮೌಲ್ಯ ವ್ಯವಸ್ಥೆಯ ಮೂಲಕ ಪಡೆದುಕೊಳ್ಳುವಲ್ಲಿ ಯಶಸ್ವಿಯಾಗುತ್ತದೆ. ಧರ್ಮವನ್ನು ಪ್ರಶ್ನಾತೀತ ಎಂದು ಹೇಳುವುದರ ಮೂಲಕವೇ ತನ್ನ ಮೇಲೆ ತನಗೆ ಮಾತ್ರ ಹೇರಲ್‌ಪಟ್ಟಿರುವ ಮೌಲ್ಯ ವ್ಯವಸ್ಥೆಯನ್ನು ಪ್ರಶ್ನಿಸುವಲ್ಲಿ ಹೆಣ್ಣನ್ನು ಹೇಗೆ ಅಸಹಾಯಕಗೊಳಿಸಲಾಗುತ್ತದೆ ಎಂಬುದಾಗಿ ಇಂತಹ ಧರ್ಮ ಮತ್ತು ಧಾರ್ಮಿಕ ನಂಬಿಕೆಗಳು ಹೆಣ್ಣಿನ ಶೋಷಣೆಯ ಆಕಾರಗಳು ಹೌದು, ಪರಿಕರಗಳು ಹೌದು.

ಧರ್ಮಗಳ ದೃಷ್ಟಿಕೋನದ ಹಿನ್ನೆಲೆಯಲ್ಲಿ ಮಹಿಳೆಯ ಧಾರ್ಮಿಕ ಚಹರೆಯನ್ನು ಗುರುತಿಸುವಾಗ ಮುಸ್ಲಿಂ ಸಮುದಾಯದಲ್ಲಿ ಗಂಡು-ಹೆಣ್ಣಿನ ನಡುವೆ ಧಾರ್ಮಿಕ ನಿಯಮಗಳು ಭಿನ್ನತೆಯಿಂದ ಕೂಡಿರುವುದನ್ನು ಕಾಣಬಹುದಾಗಿದೆ. ಧಾರ್ಮಿಕ ಅಸ್ತಿತ್ವಗಳಲ್ಲಿ ಪುರುಷರ ಪಾತ್ರವು ಧಾರ್ಮಿಕ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಣೆ ಮಾಡಿಕೊಂಡು ಬಂದಿರುವುದರಿಂದ ಅವರ ಪುರುಷ ಪರವಾದ ಹಿತಾಸಕ್ತಿಗಳು ಧರ್ಮಗಳ ಸ್ವರೂಪದಲ್ಲಿ ಸೃಷ್ಟಿಸಲ್ಪಟ್ಟಿದೆ. ಹಾಗಾಗಿ ಧಾರ್ಮಿಕ ಅಸ್ತಿತ್ವವೆಂಬುದು ಪುರುಷರಿಗೆ ಸಹಜವಾದ ಸಕಾರಾತ್ಮಕ ಪ್ರಕ್ರಿಯೆಯಾದರೆ ಮಹಿಳೆಯ ಅಸ್ತಿತ್ವದ ನೆಲೆಯಿಂದ ಅಷ್ಟೇ ವಿರುದ್ಧವಾಗಿಯೂ ಕಾಣಿಸಿಕೊಳ್ಳುತ್ತದೆ. ಈ ಕಾರಣಕ್ಕಾಗಿಯೇ ಸ್ತ್ರೀವಾದಿಗಳು ಧಾರ್ಮಿಕ ಸಂರಚನೆಯನ್ನು ವಿಶ್ಲೇಷಣಾತ್ಮಕವಾಗಿ ಪರಿಶೀಲಿಸುವುದು ಕಂಡುಬರುತ್ತದೆ. ಧರ್ಮವು ಸಾಮಾಜಿಕ ಸಂಸ್ಥೆಯಾಗಿ ಕಾರ್ಯ ನಿರ್ವಹಿಸುತ್ತಾ ಮನುಷ್ಯನ ಸಾಮಾಜಿಕ ಸಂಘಟನಾತ್ಮಕ ಹಾಗೂ ವೈಯಕ್ತಿಕ ನಡಾವಳಿಗಳನ್ನು ರಚಿಸಿ ಆಚರಿಸಿಕೊಂಡು ಬಂದಿದೆ ಎಂಬುದನ್ನು ಗುರುತಿಸಬಹುದಾಗಿದೆ. ಧರ್ಮ ಮತ್ತು ಪುರುಷ ಪ್ರಧಾನ ವ್ಯವಸ್ಥೆಗಳ ಚೌಕಟ್ಟಿನಲ್ಲಿ ಸಾಮಾಜಿಕ ಸಂರಚನೆಯಾದ ಮೂಢನಂಬಿಕೆ, ಬುರ್ಖಾಪದ್ಧತಿ, ಸಿನಿಮಾ ನಿರ್ಬಂಧ, ಸಂತಾನಹರಣ ಚಿಕಿತ್ಸೆಯು ರೂಪಗೊಂಡಿರುವುದನ್ನು ಕಾಣಬಹುದಾಗಿದೆ. ಕಾರ್ಲ್‌ಮಾರ್ಕ್ಸ್ ಹೇಳಿದಂತೆ 'ನಿಧಾನವಾಗಿ ಮಂಪರು ಸ್ಥಿತಿಯಲ್ಲಿರುವ ಅಫೀಮು ಧರ್ಮವಾಗಿದೆ' ಎಂಬ ಆತನ ವ್ಯಾಖ್ಯಾನವನ್ನು ಕೇವಲ ಉತ್ಪಾದಕ ಸಂಬಂಧಗಳಲ್ಲಿ ಮಾತ್ರವಲ್ಲದೆ ಸಾಂಸ್ಕೃತಿಕ ಸಂದರ್ಭವಾದ ಗಂಡು-ಹೆಣ್ಣಿನ ಸಂಬಂಧದಲ್ಲಿಯೂ ಅವರ ಚಿಂತನೆಯನ್ನು ಅನ್ವಯಿಸಿಬಹುದಾಗಿದೆ.

ಧರ್ಮದ ಒಳಗಿನ ಮಿಥ್‌ಗಳನ್ನು ಧರ್ಮ ಹಾಕಿದ ಮಿತಿಗಳನ್ನು ಮೀರುತ್ತ ಹೊಸ ಸಂಸ್ಕೃತಿಯೊಂದನ್ನು ನಿರ್ಮಿಸಬೇಕಾದ ಜವಾಬ್ದಾರಿ ಮುಸ್ಲಿಂ ಮಹಿಳಾ ಬರಹಗಾರರಿಗಿದೆ. ಅದನ್ನು ಮುಸ್ಲಿಂ ಸ್ತ್ರೀಯರ ಬಹು ಮುಖ್ಯ ಆಶಯವನ್ನು ಸಾರಾ ಅಬೂಬಕ್ಕರ್‌ರವರ ಮಾತುಗಳಲ್ಲಿ ಗ್ರಹಿಸಬಹುದಾಗಿದೆ. "ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು" ಕಾದಂಬರಿಯ ಮೂಲಕ ನಾನು ಮುಸ್ಲಿಂ ಸಮಾಜವನ್ನು ಅವಮಾನಿಸುತ್ತಿದ್ದೇನೆ ಎಂಬ ಅಪಾದನೆಯನ್ನು ನಾನು ಹಲವರ ಬಾಯಿಯಿಂದ ಕೇಳಿದ್ದೇನೆ. ಇದರಿಂದ ನನಗೆ ತುಂಬಾ ನೋವುಂಟಾಗಿದೆ. ಯಾಕೆಂದರೆ ನಮ್ಮ ಸಮಾಜವನ್ನು ತಿದ್ದುವ

ಸಲುವಾಗಿ ನಾನು ಸಮಾಜದ ಕೆಲ ಕ್ರೂರ ಪದ್ಧತಿಗಳೆಡೆಗೆ ಬೆಳಕು ಚೆಲ್ಲುತ್ತಿದ್ದೇನೆಯೇ ಹೊರತು ನಾನು ಹುಟ್ಟಿರುವ ಸಮಾಜವನ್ನು ಅವಮಾನಿಸುವುದು ಖಂಡಿತವಾಗಿಯೂ ನನ್ನ ಉದ್ದೇಶವಲ್ಲ. ಸಾಹಿತ್ಯವೆಂಬುದು ಸಮಾಜದ ಪ್ರತಿಬಿಂಬವಾಗಬೇಕೆಂದು ಬಯಸುವವಳು ನಾನು. ಕೊಳೆತ ಭಾಗವನ್ನು ಹಾಗೆಯೇ ಮುಚ್ಚಿಟ್ಟರೆ ಅದು ಇನ್ನಷ್ಟು ಕೊಳೆತು ಹೋಗುತ್ತದೆಯೆಂಬುದನ್ನು ನಾವು ಈಗಾಗಲೇ ಮನಗಂಡಿದ್ದೇವೆ. ಆದುದರಿಂದಲೇ ಆ ಭಾಗವನ್ನು ಕಿತ್ತೆಸೆಯಬೇಕಾಗುತ್ತದೆ. ಹೀಗೆ ಕಿತ್ತೆಸೆಯಬೇಕಾದರೆ, ಮೊದಲು ಆ ಭಾಗದ ಮೇಲೆ ಬೆಳಕು ಬೀಳಬೇಕು. ಈ ಬೆಳಕು ಚೆಲ್ಲುವ ಕೆಲಸವನ್ನಷ್ಟೇ ನಾನು ಮಾಡುತ್ತಿದ್ದೇನೆ"[1] ಎಂದು ಸಾರಾ ಅಬೂಬಕ್ಕರ್‌ರವರು ತಮ್ಮ 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ.

ಬಂಡಾಯದ ಸಂದರ್ಭದಲ್ಲಿ ಮುಸ್ಲಿಂ ಜನಾಂಗದ ನೋವು-ನಲಿವು, ನಂಬಿಕೆ, ಆಚರಣೆ, ಧರ್ಮ, ಶ್ರದ್ಧೆ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿನ ಕಾಲದ ಸ್ಥಿತ್ಯಂತರಗಳು ಕಂಡುಬರುತ್ತವೆ. ಧಾರ್ಮಿಕ ಹಿಡಿತಗಳು, ಶೋಷಣೆಗಳು, ನಿಲುಕದ ಸೌಲಭ್ಯಗಳು, ಸಮಾನತೆಯಿಲ್ಲದ ಸ್ತ್ರೀಯರ, ಸಿದ್ಧ ಮಾದರಿಗಳು ಮುಸ್ಲಿಂ ಸಮುದಾಯದ ಬದುಕಿನಲ್ಲಿ ಹೇಗೆ ತಲ್ಲಣಗಳನ್ನು ಉಂಟುಮಾಡಿದೆ ಎಂದು ತಿಳಿಯಬಹುದಾಗಿದೆ. ಮುಸ್ಲಿಂ ಸಮುದಾಯವು ತನ್ನ ಧರ್ಮದ ನಿಯಮಕ್ಕಾನುಸಾರವಾಗಿ ಹೇಗೆ ಕೆಲವೊಂದು ನಂಬಿಕೆಗಳನ್ನು ರೂಪಿಸಲ್ಪಟ್ಟು ಹೆಣ್ಣಿಗೆ ಮಾತ್ರ ನಿರ್ಬಂಧಗಳನ್ನು ಹೇರಿ, ಇದನ್ನು ಗಂಡಿಗೆ ಹೇರದೆ ಇರುವರು ಎಂಬುದನ್ನು ಸಾರಾ ಅಬೂಬಕ್ಕರ್ ಅವರ ಕಾದಂಬರಿಗಳ ಮುಖಾಂತರ ಗುರುತಿಸಬಹುದಾಗಿದೆ. ಮಧ್ಯಮ ವರ್ಗದಲ್ಲಿ ಮೇಲ್‌ಸ್ತರ ಮತ್ತು ಕೆಳಸ್ತರಗಳಿದ್ದು ಇಲ್ಲಿನ ಮುಸ್ಲಿಂ ಸಮುದಾಯದವರಲ್ಲಿ ಅವರದೇ ಆದಂತಹ ಧಾರ್ಮಿಕ ನಂಬಿಕೆಗಳು ಇರುವುದು. ಶಿಕ್ಷಣವನ್ನು ಪಡೆದಂತಹ ಗಂಡು ಹೆಣ್ಣಿನ ಮೇಲೆ ನಿಯಮಗಳನ್ನು ಹೇರುವುದಿಲ್ಲ. ತನಗೆ ಏನೇ ಕಷ್ಟ ಸಂಭವಿಸಿದರೂ, ವೈಚಾರಿಕ ಪ್ರಜ್ಞೆಯಿಂದ ಆಲೋಚಿಸಿ ತನ್ನ ಸಮಸ್ಯೆಗೆ ತಾನೇ ಪರಿಹಾರವನ್ನು ಕಂಡು ಕೊಳ್ಳುತ್ತಾನೆ. ಅದೇ ಶಿಕ್ಷಣ ಪಡೆಯದೇ ಇರುವ ವ್ಯಕ್ತಿ ಪ್ರತಿಯೊಂದು ವಿಷಯಕ್ಕೂ ಧರ್ಮದ ಮೊರೆ ಹೋಗುವುದನ್ನು ಸಾರಾ ಅಬೂಬಕ್ಕರ್ ಅವರು ತಮ್ಮ ಕಾದಂಬರಿಗಳ ಮೂಲಕ ತಿಳಿಸುತ್ತಾ ಹೋಗುವ ಬಗೆಯನ್ನು ಕಾಣಬಹುದಾಗಿದೆ.

ಧಾರ್ಮಿಕ ನಂಬಿಕೆಗಳು ಮತ್ತು ಮುಸ್ಲಿಂ ಸಮುದಾಯವನ್ನು ಮೂಢನಂಬಿಕೆ, ಬುರ್ಕಾ ಪದ್ಧತಿ, ಸಿನಿಮಾ ನಿರ್ಬಂಧ, ಸಂತಾನಹರಣ ಚಿಕಿತ್ಸೆ ನಿಷೇಧ ಎಂಬ ಆಧಾರದ ಮೇಲೆ ವರ್ಗೀಕರಣವನ್ನು ಮಾಡಿ ಗುರುತಿಸಬಹುದಾಗಿದೆ.

### 1. <u>ಮೂಢನಂಬಿಕೆ:</u>

ಇದು ಮನುಷ್ಯನ ಸಹಜ ಮನಪ್ರವೃತಿಗೆ ಸಂಬಂಧಪಟ್ಟಿರುವುದು ಆಗಿದೆ. ಬದುಕಿನಲ್ಲಿ ನಡೆಯುವಂತಹ ಪ್ರತಿಯೊಂದು ಘಟನೆಗೂ ಆತ ಧರ್ಮದ ಮೊರೆ ಹೋಗುವುದನ್ನು ಕಾಣಬಹುದಾಗಿದೆ. ಅಲ್ಲದೇ ಗಂಡು ಹೇಗೆ ಹೆಣ್ಣಿನ ಮೇಲೆ ಧರ್ಮದ ನಿಯಮಗಳನ್ನು ನಂಬಿಕೆಗಳನ್ನಾಗಿ ಹೇರಿರುವರು ಎಂಬುದಾಗಿ ಸಾರಾ ಅವರ ಕಾದಂಬರಿಗಳಲ್ಲಿ ಕಾಣಬಹುದಾಗಿದೆ. ಸಾರಾರವರ ತಮ್ಮ 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ಮುನ್ನುಡಿಯಲ್ಲಿ ತಮ್ಮ ನಿಲುವನ್ನು ಹೀಗೆ ವ್ಯಕ್ತಪಡಿಸುವರು. ಮುಸ್ಲಿಂ

ಸಮಾಜದಲ್ಲಿ (ಇತರ ಸಮಾಜಗಳಲ್ಲಿ ಕೂಡಾ) ಹರಡಿರುವ ಹಲವಾರು ಮೂಢನಂಬಿಕೆಗಳಿಂದಾಗಿ ಮಹಿಳೆಯರು ಶೋಷಣೆಗೊಳಗಾಗುತ್ತಿರುವುದನ್ನು ನಾವು ನೋಡುತ್ತಲೇ ಇದ್ದೇವೆ. ಇಂತಹ ಶೋಷಣೆಗಳ ವಿರುದ್ಧ ಆಯಾ ಸಮಾಜಗಳ ಮಹಿಳೆಯರು ಒಟ್ಟಾಗಿ ಧ್ವನಿ ಎತ್ತಬೇಕು. ಇಂದು ಧರ್ಮ ಮತ್ತು ಸಂಸ್ಕೃತಿಯ ಹೆಸರಿನಲ್ಲಿ ಮಹಿಳೆಯರನ್ನು ಮತ್ತಷ್ಟು ಮೂಲೆಗೊತ್ತಿಸಲು ಎಲ್ಲ ಪುರುಷ ಪ್ರಧಾನ ಸಮಾಜಗಳು ಪ್ರಯತ್ನಸುತ್ತಲೇ ಇವೆ. ಈ ಕುರಿತು ಮಹಿಳೆಯರು ಜಾಗೃತರಾಗಬೇಕು ಎಂದು ಹೇಳಿರುವರು.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ಮಹಮ್ಮದ್ ಖಾನರ ಆರೋಗ್ಯವು ಹದಗೆಟ್ಟಾಗ, ಹಸಿವು ಇರದೇ ಆಗಾಗ ಹೊಟ್ಟೆ ನೋವು ಬರುತ್ತಿತ್ತು. ಕೆಲವೊಮ್ಮೆ ತಿಂದದ್ದೆಲ್ಲ ವಾಂತಿಯಾಗುತ್ತಿತ್ತು. ಒಂದೆರಡು ಬಾರಿ ಮಣಿಪುರದ ಧರ್ಮಾಸ್ಪತ್ರೆಗೆ ಹೋಗಿ ಅಲ್ಲಿನ ಬಣ್ಣದ ನೀರನ್ನು ಕುಡಿದರೂ ಏನು ಪ್ರಯೋಜನವಾಗಲಿಲ್ಲ. 'ಮಂಗಳೂರಿಗೆ ಹೋಗಿ ಹೊಟ್ಟೆಯ 'ಪೋಟೊ' ತೆಗೆಸಿಕೊಂಡು ಬನ್ನಿ' ಎಂದು ಅಲ್ಲಿನ ವೈದ್ಯರು ಹೇಳಿದ್ದನ್ನು ಕೇಳಿಕೊಂಡು ಊರಿಗೆ ಬಂದು ಫಾತಿಮ್ಮಳೊಡನೆ, 'ಮಂಗಳೂರಿಗೆ ಹೋಗಬೇಕಂತೆ ಪೋಟೊ ತೆಗೆಸಬೇಕಂತೆ. ನಾಳೆ ಹೊಟ್ಟೆ ಕುಯ್ಯಿಸಿ ಕೊಳ್ಳೆಂದರೆ ಅದನ್ನು ಮಾಡಬೇಕು! ಈ ಡಾಕ್ಟರುಗಳಿಗೆಲ್ಲ ಎಂತದು ಗೊತ್ತಾಗುತ್ತದೆ? ನಾಳೆ ಪಂಡಿತ ಮನೆಗೆ ಹೋಗುತ್ತೇನೆ'[2] ಎಂದು ಮುಸುಕು ಹಾಕಿ ಮಲಗಿದರು. ತಮ್ಮ ಆರೋಗ್ಯದ ಸ್ಥಿತಿಯು ಹದಗೆಟ್ಟರೂ ವೈದ್ಯರ ಬಳಿ ಹೋಗಿ ಔಷಧಿಯನ್ನು ತೆಗೆದುಕೊಳ್ಳದೆ ಮೂಢನಂಬಿಕೆಯ ನೆಲೆಗೆ ಸಿಲುಕಿ ನಿರ್ಲಕ್ಷಕ್ಕೆ ಒಳಗಾದ ಬಗೆಯು ಕಂಡುಬರುವುದು. 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಬರುವಂತಹ ನಾದಿರಾ ಒಂದು ನದಿಯನ್ನು ದಾಟಬೇಕಾದರೂ ಸಹಿತ ಒಬ್ಬಂಟಿಯಾಗಿ ದಾಟುವ ಆಗಿರಲಿಲ್ಲ. ಸ್ವಂತ ಗಂಡನ ಜೊತೆಗೆ ನದಿ ದಾಟಬೇಕಾದರೂ ಸಹಿತ ಆಕೆಯ ಮನಸ್ಸಿನಲ್ಲಿ ಉಂಟಾಗುವಂತಹ ಗೊಂದಲವನ್ನು ಗುರುತಿಸಬಹುದಾಗಿದೆ. ಅಲ್ಲದೇ ನಾದಿರಾಳ ಮದುವೆ ಆಗಿ ಆಕೆಯ ಗಂಡ ದೂರವಾದಾಗ ಇವಳ ಮನಸ್ಥಿತಿಯು ಸರಿಯಿಲ್ಲದೆ ಕೆಲಸ ಮಾಡಲು ಆಗದೇ ಇರುವಾಗ ಈಕೆಯ ತಾಯಿ ಬಂದು 'ಅವಳು ಮನಸ್ಸಿಟ್ಟು ಕೆಲಸವನ್ನು ಮಾಡುವುದಾದರೂ ಹೇಗೆ? ಮಗುವನ್ನು ಎತ್ತಿಕೊಂಡು ಹೋದಗಿನಿಂದ ಅವಳು ಸೈತಾನ ಹಿಡಿದವರ ಹಾಗಾಡುತ್ತಾಳೆ. ಒಂದೊಂದು ಸಲ ಊಟವನ್ನೂ ಮಾಡುವುದಿಲ್ಲ. ನಾನು ಕರೆಯಲು ಹೋದರೆ ನನ್ನ ಮೇಲೆ ಹರಿಹಾಯುತ್ತಾಳೆ. ಸೊರಗಿ ಕಡ್ಡಿಯಾಗುತ್ತಿರುವುದು ನಿಮಗೆ ಕಾಣಿಸುವುದಿಲ್ಲವೇ? ಅಲ್ಲಾಹ್‌ಗೆ ನನ್ನ ಮೇಲೆ ಕರುಣೆಯೇ ಇಲ್ಲ'[3] ಎನ್ನುತ್ತಾ ಫಾತಿಮ್ಮ ಧರ್ಮದ ಮೊರೆ ಹೋಗುವುದನ್ನು ಕಾಣಬಹುದಾಗಿದೆ.

ತಂದೆ ಮಹಮ್ಮದ್‌ಖಾನ್‌ರ ಸ್ವ ಪ್ರತಿಷ್ಠೆ ಮತ್ತು ಗಂಡ ರಶೀದ್‌ನ ಆತುರದ ನಿರ್ಧಾರದಿಂದ ತಲಾಖ್‌ಗೆ ಒಳಪಟ್ಟ ನಾದಿರಾಳು ಕುಟುಂಬದ ಧಾರ್ಮಿಕ ಸಂಕೋಲೆಗಳಾದ ಮೂಢನಂಬಿಕೆಗೆ ಸಿಲುಕಿ ತನ್ನ ಬದುಕನ್ನು ಸಂಕಷ್ಟಗಳಿಗೆ ಸಿಲುಕಿಕೊಂಡಾಗ, ರಶೀದ್‌ನು ಧರ್ಮದ ಮೂಢನಂಬಿಕೆಗಳಿಗೆ ವಿರುದ್ಧವಾಗಿ ಪ್ರಶ್ನಿಸುತ್ತಾ ಪ್ರತಿಭಟಿಸುವನು. 'ಹೆಣ್ಣನ್ನು ತಮಗಿಷ್ಟ ಬಂದಂತೆ ಈ ಪುರುಷ ಪ್ರಧಾನ ಸಮಾಜವು'[4] ಹೆಣ್ಣಿನ ಚಲನವಲನಗಳ ಮೇಲೆ ನಿಯಂತ್ರಣವನ್ನು ಇಟ್ಟುಕೊಂಡಿರುವಾಗ ಅದೇ ಸಮುದಾಯದಿಂದ ಬಂದ ನಾದಿರಾಳು ಧರ್ಮವು ವಿಧಿಸಿದ 'ತಲಾಖ್' ಬಗೆಗಿನ ವಿಚಾರಗಳನ್ನು ಯಾಕೆ ಹೀಗೆ ಧರ್ಮದಲ್ಲಿ ನಿಯಮಗಳನ್ನು ಹೆಣ್ಣಿನ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ಅವಕಾಶವನ್ನು ಕೊಡದೇ ವಿರುದ್ಧವಾಗಿ ಉಲ್ಲೇಖಿಸಲಾಗಿದೆ ಎಂದು ಪ್ರಶ್ನೆಯನ್ನು ಮಾಡುವ ಮನಸ್ಥಿತಿಯನ್ನು ಹೊಂದದೆ ಇರುವಳು ಎಂಬುದಾಗಿ ತಿಳಿಯುವನು. ಅಲ್ಲದೇ ನಾದಿರಾ ತಂಗಿ ಜಮೀಲಾಳು ತನ್ನ ಅಕ್ಕನಿಗೆ ಒಮ್ಮೆ 'ನಿನಗೆ ಧೈರ್ಯವಿದ್ದರೆ ಈ ನದಿಯನ್ನು ದಾಟಿ ನಿನ್ನ ಗಂಡನನ್ನು ಸೇರು'[5] ಎಂದು ಕೂಡ ಸಲಹೆಯನ್ನು ನೀಡುವಳು. ಇಲ್ಲೂ ಸಹ ಧರ್ಮವು ನಿಯಮವನ್ನು ರೂಪಿಸಿರುವಂತೆ 'ಹೆಣ್ಣು ಮಕ್ಕಳು ಮನೆಯ ಹೊಸ್ತಿಲನ್ನು ದಾಟಿ ಹೊರಗೆ

ಹೋಗಬಾರದು, ಪರಪುರುಷರಿಗೆ ತಮ್ಮ ಮುಖ ಚಹರೆಯನ್ನು ತೋರಿಸಬಾರದು, ಒಬ್ಬಂಟಿಯಾಗಿ ಎಲ್ಲೂ ತಿರುಗಬಾರದು"[6] ಎಂಬ ನಿಯಮದಂತೆ ನಾದಿರಾಳ ಮನಸ್ಸಿನಲ್ಲಿ ಈ ಮೂಢನಂಬಿಕೆಯ ವಿಚಾರಗಳು ಸ್ಥಾಪಿಸಲ್ಪಟ್ಟಿದ್ದರಿಂದ ಆಕೆ ಧರ್ಮದ ನಿಯಮಗಳನ್ನು ಮೀರದೆ, ಅದನ್ನು ಪ್ರಶ್ನಿಸಲಾರದೆ ಇರುವುದು ಕಂಡುಬರುತ್ತದೆ. ತಮ್ಮ ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳು ಮೌನವಾಗಿ ಎಲ್ಲಾವನ್ನು ಸಹಿಸಿಕೊಳ್ಳುವಂತೆ ನಾದಿರಾಳು ಸಹ ಸಂಕಷ್ಟಗಳನ್ನು ಅನುಭವಿಸಿ ಬದುಕನ್ನು ನಡೆಸುವುದು ಕಂಡುಬರುತ್ತದೆ. ಇಂತಹ ಧಾರ್ಮಿಕ ನಂಬಿಕೆಗಳ ಸಂಕೋಲೆಯಲ್ಲಿ ಸಿಲುಕಿ ಹೆಣ್ಣು ಮಕ್ಕಳು ತಮ್ಮ ಬದುಕನ್ನು ಕಳೆಯುತ್ತಿರುವ ಪ್ರತೀಕವೆಂಬಂತೆ ನಾದಿರಾಳು 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಬರುವುದನ್ನು ಗುರುತಿಸಬಹುದಾಗಿದೆ.

'ಸಹನಾ' ಕಾದಂಬರಿಯಲ್ಲಿ ಮೂಢನಂಬಿಕೆಗೆ ಸಂಬಂಧಿಸಿದ ಕುರುಹುಗಳು ಕಂಡುಬರುವುದು. ನಸೀಮಳು ಮದುವೆ ಆಗಿ ಗರ್ಭಿಣಿಯಾದಾಗ ಈಕೆಯ ಅತ್ತೆ ಕೆಲವು ಮೂಢನಂಬಿಕೆಯ ವಿಷಯಗಳನ್ನು ಹೇರಿದ್ದರಿಂದ ತಾಯಿಯ ಮನೆಗೆ ಹೋದಾಗ ಸರಿಯಾಗಿ ಊಟವನ್ನು ಮಾಡದೇ 'ಬೇಡ ಉಮ್ಮ ನನಗೆ ಹಸಿವಿಲ್ಲ'[7] ಎಂದಾಗ ತಾಯಿಗೆ ಇನ್ನೂ ಅಚ್ಚರಿಯಾದಾಗ ತಾಯಿ ಯಾಕೆ ತಿನ್ನುವುದಿಲ್ಲ ಎಂದು ಕಾರಣ ಕೇಳಿದಾಗ 'ಗರ್ಭಿಣಿಯರು ಹೆಚ್ಚು ತಿನ್ನಬಾರದೆಂಬ'[8] ಅತ್ತೆಯ ಮಾತನ್ನು ತಾಯಿಗೆ ತಿಳಿಸಿದಾಗ ಅದೆಲ್ಲ ಅವರ ಮೂಢನಂಬಿಕೆ ಎಂದು ತಾಯಿ ಸಕೀನ ಹೇಳುವುದನ್ನು ಕಾಣಬಹುದಾಗಿದೆ. ಅಂದರೆ ಒಂದು ಕಡೆ ಮೂಢನಂಬಿಕೆಯನ್ನು ಎಲ್ಲಾ ವಿಷಯದಲ್ಲಿಯೂ ಅನ್ವಯಿಸುತ್ತಾ ಹೋದರೆ ಮತ್ತೊಂದು ಕಡೆ ಅದೆಲ್ಲಾ ತಪ್ಪು ತಿಳುವಳಿಕೆ ಎಂದು ಪ್ರತಿಕ್ರಿಯಿಸುವ ಬಗೆಯನ್ನು ಗುರುತಿಸಬಹುದಾಗಿದೆ. ನಸೀಮ ತನ್ನ ವೈವಾಹಿಕ ಬದುಕನ್ನು ನಡೆಸಿ ತಾಯ್ತಾನವನ್ನು ಪಡೆದಾಗ ಆಕೆಯು ಕೆಲವೊಮ್ಮೆ ಆಹಾರವನ್ನು ಸೇವಿಸದೇ ಇರುವಾಗ ಕತೀಜಮ್ಮ ಬಂದು 'ನೋಡು ಗರ್ಭಿಣಿಯರು ಹಾಲು ಕುಡಿಯಬಾರದು ಎಂದು ಹೇಳುವಳು'.[9] ನಸೀಮಳು ರೋಗದಿಂದ ನರಳುತ್ತಾ ಇದ್ದಾಗ ವೈದ್ಯರ ಬಳಿ ಕರೆದೊಯ್ಯದೆ ಪಂಡಿತರ ಬಳಿಯಿಂದ ಔಷಧಿಯನ್ನು ತಂದು ಕೊಡುವಳು. ಕೆಲಸ ಮಾಡದೇ ಸುಮ್ಮನೆ ಕುಳಿತರೆ ಮೈಯಲ್ಲಿ ಸೈತಾನ ಹಿಡಿದಿದೆ ಎಂಬಂತಹ ಮೂಢನಂಬಿಕೆಯ ಕಲ್ಪನೆಯು ಕಾದಂಬರಿಯ ಸನ್ನಿವೇಶದಲ್ಲಿ ಕಂಡುಬರುತ್ತದೆ. ರೋಗದ ಸ್ಥಿತಿಯು ಸುಧಾರಿಸಿದರೆ ಕತೀಜಮ್ಮ 'ಪಂಡಿತರ ಔಷಧಿಯಿಂದ ಈಗ ಕೊಂಚ ಗುಣವಾಗಿದೆ. ಸ್ವಲ್ಪ ದಿನ ಹೋಗಲಿ ಅದೂ ಅಲ್ಲದೆ ಒಮ್ಮೆ ನಮ್ಮ ಮೌಲವಿಯವರನ್ನು ಕರೆಸಿ ತಟ್ಟೆಯಲ್ಲಿ ಬರೆಸಿ ಕುಡಿಸೋಣ ಇದು ಏನೋ ಸೈತಾನನ ಉಪದ್ರ ಇರಬೇಕು. ತಟ್ಟೆ ಕುಡಿದರೆ ಸೈತಾನ್ ಬಿಟ್ಟು ಹೋಗುತ್ತದೆ'[10] ಎಂಬುದು ಮೂಢನಂಬಿಕೆಯ ವ್ಯಕ್ತಿಯ ಮನಸ್ಥಿತಿಗೆ ಸಂಬಂಧಿಸಿದ ಅಂಶಗಳಾಗಿವೆ.

ನಸೀಮಳ ಮಗುವಿಗೆ ಆರೋಗ್ಯದ ಸ್ಥಿತಿಯು ಹದಗೆಟ್ಟಾಗ ಅತ್ತೆ ಕತೀಜಮ್ಮ "ಬೆಳಗಾಗುವ ಹೊತ್ತಿಗೆ ವಾಸಿಯಾದೀತು. ಮಕ್ಕಳೆಂದರೆ ಇಂತಹ ಚಿಕ್ಕಪುಟ್ಟ ಕಾಯಿಲೆಗಳೆಲ್ಲ ಇದ್ದದ್ದೆ. ಒಂದು ದಿನ ಮೈ ಬಿಸಿ, ಮತ್ತೊಂದು ದಿನ ಹೊಟ್ಟೆ ಚೆನ್ನಾಗಿಲ್ಲ. ಮಕ್ಕಳು ಸುಲಭವಾಗಿ ಬೆಳೆಯುತ್ತಾರೆಯೇ? ಈಗ ನೀವು ಮಲಗಿ. ಬೆಳ್ಳಿಗೆ ನೋಡೋಣ" ಎಂದು ಕತೀಜಮ್ಮ ಇಬ್ಬರನ್ನು ಸಂತೈಸಿ ಒಳಹೋಗಿ ಮಲಗಿದಳು. ಮರುದಿನ ಮಗುವಿಗೆ ಜ್ವರವು ಇಳಿಯದೇ ಇರುವಾಗ ಗಂಡ ಪಾಷಾನೊಂದಿಗೆ ನೀವು ಇಂದು ಕೆಲಸಕ್ಕೆ ಹೋಗಬೇಡಿ ಮಗುವನ್ನು ಆಸ್ಪತ್ರೆಗೆ ಕರೆದೊಯ್ಯೋಣ ಎಂದು ನಸೀಮ ಹೇಳಿದಾಗ ಅತ್ತೆ "ಅವನನ್ಯಾಕೆ ಬಲವಂತ ಮಾಡ್ತಿಯಾ ನಸೀಮಾ? ಅವನು ಹೋಗಿ ಬರಲಿ . ನಾನೀಗ ಪಂಡಿತರ ಮನೆಗೆ ಹೋಗಿ ಮಗುವಿಗೆ ಔಷಧಿ ತರುತ್ತೇನೆ."[11] ಎಂದು ಹೇಳಿದಳು. ಕತೀಜಮ್ಮ ಪಂಡಿತರಿಂದ ಔಷಧಿಯ ಬೇರು ತಂದು ಜಜ್ಜಿ ಕಷಾಯ ಮಾಡಿ ಮಗುವಿಗೆ ಕುಡಿಸಿದಳು.

ಸಂಜೆಯಾಗುತ್ತಿದ್ದಂತೆ ಮಗುವಿನ ಜ್ವರ ತೀವ್ರವಾಯಿತು. ಅವಳ ಕೈ ಕಾಲುಗಳಲ್ಲಿ ಒಂದು ರೀತಿಯ ಸೆಳೆತ ಕಾಣಿಸಿಕೊಂಡಿತ್ತು. ದೇಹವು ಬಿಲ್ಲಿನಂತೆ ಬಾಗುತ್ತಿತ್ತು. ಹಾಲನ್ನೋ, ನೀರನ್ನೋ ಬಾಯಿಗೆ ಹೊಯ್ದಾರೆ ಕಟಬಾಯಿಯಲ್ಲಿ ಹೊರಬರುತ್ತಿತ್ತು. ಬೆಳಗಿನ ಜಾವವಾದಾಗ ಮಗು ಒಮ್ಮೆ ಜೋರಾಗಿ ಕೈ ಕಾಲು ಬಡಿಯಿತು. ದೇಹ ಬಿಲ್ಲಿನಂತೆ ಬಾಗಿತು. ಬಾಯಿಯಿಂದ ನೊರೆ ಬಂದು ಮತ್ತೆ ಸ್ತಬ್ಧವಾಗಿ ಮಗು ಸಾವನ್ನಪ್ಪಿತ್ತು. ಇಲ್ಲಿ ಮೂಢನಂಬಿಕೆಗೆ ಸಿಲುಕಿ ವೈದ್ಯರ ಬಳಿ ಕರೆದೊಯ್ದು ಔಷಧಿಯನ್ನು ಕೊಡಿಸದೇ, ಮಗುವನ್ನು ಕಳೆದುಕೊಂಡಂತಹ ಸ್ಥಿತಿಯು ಕಂಡುಬರುವುದು.

ನಸೀಮಳು ಪುನಃ ಗರ್ಭ ಧರಿಸಿದಾಗ ಬಾಣಂತಿಯ ಸಂದರ್ಭದಲ್ಲಿ ಸೊಸೆಯನ್ನು ವೈದ್ಯರ ಬಳಿ ಕರೆದೊಯ್ದು ಔಷಧಿ ಉಪಚಾರವನ್ನು ಮಾಡದೇ ಇದ್ದಾಗ, ನಸೀಮಳಿಗೆ ಆಹಾರವೂ ಬಾಯಿಗೆ ರುಚಿಯನ್ನು ನೀಡುತ್ತಿರಲಿಲ್ಲ. ನಾಲ್ಕು ದಿನಕ್ಕೊಮ್ಮೆ ನೆಗಡಿ, ಕೆಮ್ಮು, ಜ್ವರ ಎಂದು ಮಲಗಿದಳು. ಬಾಣಂತಿ ಸರಿಯಾಗಿ ಸ್ನಾನ ಮಾಡದಿದ್ದರೆ ಹೇಗೆ ಎಂದು ಅತ್ತೆ ಗೊಣಗಿದಳು. ಬಾಣಂತನ ಮುಗಿಸಿ ತಾಯಿ ಸಕೀನ ತನ್ನ ಮನೆಗೆ ಹೊರಟಳು. ಹೊರಡುವ ಮೊದಲು ಕತೀಜಮ್ಮಳೊಡನೆ,

"ನೋಡಿ ಉಮ್ಮ, ನಸೀಮಳ ಆರೋಗ್ಯ ಚೆನ್ನಾಗಿಲ್ಲ. ಅವಳನ್ನೊಮ್ಮೆ ಯಾರಾದರೂ ವೈದ್ಯರಿಗೆ ತೋರಿಸಿದ್ದರಾಗಿತ್ತು. ಹೀಗೆ ಇವಳು ಕೆಮ್ಮುತ್ತಾ ಇದ್ದರೆ ಯಾರಿಗಾದರೂ ತೋರಿಸಿ ಅವಳಿಗೆ ಸರಿಯಾದ ಮದ್ದು ಮಾಡಿಸಬೇಕು. ನಾನೇ ಒಮ್ಮೆ ಬಂದು ಆಸ್ಪತ್ರೆಗೆ ಕರೆದುಕೊಂಡು ಹೋಗುತ್ತೇನೆ"[12] ಎಂದಳು.

"ನೆಗಡಿ, ಕೆಮ್ಮಿಗೆಲ್ಲ ಆಸ್ಪತ್ರೆ, ಡಾಕ್ಟರೆಲ್ಲ ಯಾಕೆ? ಡಾಕ್ಟರ ಬಳಿ ಹೋಗಬೇಕಾದರೆ ಕೈತುಂಬಾ ಹಣವೂ ಬೇಕು. ನಮ್ಮ ಪಂಡಿತರ ಬಳಿಗೇ ಅವಳನ್ನು ಕರೆದುಕೊಂಡು ಹೋಗುತ್ತೇನೆ. ನೀವೂ ಆಗಾಗ ಬರುತ್ತಾ ಇರಿ"[13] ಎಂದು ಕತೀಜಮ್ಮ ಸಕೀನಳನ್ನು ಕಳಿಸಿಕೊಟ್ಟಳು.

ಪಂಡಿತರ ಔಷಧಿಯನ್ನು ತಂದುಕೊಟ್ಟನಂತರ ಕತೀಜಮ್ಮ ಸಕೀನಳೊಡನೆ "ನಮ್ಮ ಮೌಲವಿಯವರನ್ನು ಕರೆಸಿ ತಟ್ಟೆಯಲ್ಲಿ ಬರೆಸಿ ಕುಡಿಸೋಣ. ಇದು ಏನೋ ಸೈತಾನನ ಉಪದ್ರ ಇರಬೇಕು.ತಟ್ಟೆ ಕುಡಿದರೆ ಸೈತಾನ್ ಬಿಟ್ಟು ಹೋಗುತ್ತಾನೆ."[14] ಎಂದಳು.

"ಆಗಲಿ, ಹಾಗೇ ಮಾಡಿ"[15] ಎಂದು ಸಕೀನ ಸೈತಾನನಲ್ಲಿ ಆಕೆಗೂ ನಂಬಿಕೆ ಇತ್ತು. ಮೈಯಲ್ಲಿ ರಕ್ತ ತುಂಬಿದಾಗ, ನಸೀಮ ಗರ್ಭಿಣಿಯಾಗಿ ಹೆರಿಗೆಗೆ ತನ್ನ ಮನೆಗೆ ಬಂದಿದ್ದಾಗ ಹೊತ್ತಿನ ಪರಿವೆ ಇಲ್ಲದೆ ಆಗಾಗ ನದೀ ತೀರದಲ್ಲೆಲ್ಲ ಅಡ್ಡಾಡುತ್ತಿದ್ದಳು. ನದಿಯ ತೀರದಲ್ಲಿ ದೊಡ್ಡ ಮರಗಳಿದ್ದೆಡೆ ಈ ಸೈತಾನ್‌ಗಳ ವಾಸ! ಆಗ ಈ ಸೈತಾನ್ ನಸೀಮಳನ್ನು ನೋಡಿ ಅವಳ ರಕ್ತ ಕುಡಿಯಲು ಅವಳ ದೇಹದಲ್ಲಿ ಸೇರಿತ್ತೊ ಏನೋ? ತನಗೆ ಈವರೆಗೂ ಇದು ಹೊಳದೇ ಇರಲಿಲ್ಲ![16] ಎಂದು ಮಗಳ ದೇಹಸ್ಥಿತಿಯ ಬದಲಾವಣೆಗೆ ಕಾರಣವನ್ನು ತಿಳಿಯದೇ ಮೂಢನಂಬಿಕೆಗೆ ಸಿಲುಕಿ ಆಕೆಯನ್ನು ಮತ್ತಷ್ಟು ಬಳಲುವಂತೆ ತೊಡಗುವ ಕಾರ್ಯಗಳು ನಡೆಯುತ್ತವೆ. ಆ ರಾತ್ರಿ ಪಾಷಾ ಮನೆಗೆ ಬಂದಾಗ ತಾಯಿಯೇ ಮಗನನ್ನು ಕಳುಹಿಸಿ ಮೌಲವಿಯವರನ್ನು ಮನೆಗೆ ಕರೆಸಿದಳು. ಅವರು ಖುರ್‌ಆನಿಯ ಕೆಲವು ಶ್ಲೋಕಗಳನ್ನು ಹೇಳಿ ನಸೀಮಳ ತಲೆಯ ಮೇಲೆ ಮಾಡಿದರು. ಒಂದು ನೂಲನ್ನು ಮಂತ್ರಿಸಿಕೊಟ್ಟು ಅದನ್ನು ಅವಳ ಕತ್ತಿಗೆ ಕಟ್ಟಲು ಹೇಳಿದರು. ಅಕ್ಕಿಯನ್ನು ಕರ್ರಗೆ ಹುರಿದು ಪುಡಿ ಮಾಡಿ ಅದಕ್ಕೆ ನೀರು ಬೆರೆಸಿ ಶಾಯಿಯಂತೆ ಮಾಡಿಕೊಂಡು ಅದರಿಂದ ಬಿಳಿಯ ಪಿಂಗಾಣಿಯ ಏಳು ತಟ್ಟೆಯಲ್ಲಿ ನೀರು ಹಾಕಿ ಕಲಕಿ

ಕುಡಿಯಬೇಕೆಂದು ಹೇಳಿ ಊಟಮಾಡಿ, ತಮಗೆ ಬರಬೇಕಾದ ಹಣವನ್ನು ವಸೂಲು ಮಾಡಿಕೊಂಡು ಅವರು ಹೊರಟು ಹೋದರು. ಹೆಣ್ಣಿನ ದೇಹ ಸ್ಥಿತಿಯಲ್ಲಿ ಸ್ವಲ್ಪವೂ ಏರುಪೇರಾದರೂ ಅದಕ್ಕೆ ಸೈತಾನನ ಉಪದ್ರವವೇ ಕಾರಣವೆಂಬ ಮನಸ್ಥಿತಿಯು ಮುಸ್ಲಿಂ ಸಮುದಾಯದಲ್ಲಿ ಇದ್ದಂತಹ ಪರಿಯನ್ನು ಗುರುತಿಸಬಹುದಾಗಿದೆ. ನಸೀಮಳಿಗೆ ಮಾನಸಿಕವಾಗಿ ಯೋಚನಾಪರಳಾಗಿ ಆಹಾರವನ್ನು ಸೇವಿಸದೆ ಇದ್ದಾಗ ಗರ್ಭಿಣಿಯಾಗಿದ್ದವಳಿಗೆ ಗರ್ಭಪಾತವಾಯಿತು. ಆದರೆ ಕುಟುಂಬ ವಲಯದಲ್ಲಿ ಇದಕ್ಕೆ ಮೂಢನಂಬಿಕೆಯ ಬೇರನ್ನು ಬಿತ್ತಿ ಹಲವು ತೊಂದರೆಗಳಿಗೆ ತುತ್ತಾಗುವ ಪ್ರಸಂಗಗಳು ಎದುರಾಗುವುದು ಕಂಡುಬರುತ್ತದೆ. ನಸೀಮಳ ಆರೋಗ್ಯದ ಮಟ್ಟವು ಸುಧಾರಿಸಿದರೆ "ಉಳ್ಳಾಲದ ದರ್ಗಾಕ್ಕೆ ಬಂದು ದರ್ಗದ ಮೇಲೆ ಬಿಳಿ ಬಟ್ಟೆ ಹಾಕಿಸುವೆ"[17] ಎಂದು ಸಕೀನ ಧರ್ಮದ ಮೊರೆ ಹೋಗುವುದನ್ನು ಕಾಣಬಹುದಾಗಿದೆ. ತನ್ನ ಮಗಳ ಹಣೆಯ ಬರಹವನ್ನು ದೇವರು ಬೇವಿನ ಮರದ ಕಡ್ಡಿಯಿಂದ ಬರೆದಿರುವನು ಎಂಬಂತಹ ನಂಬಿಕೆಗಳು ಹೇಗೆ ಮನಸ್ಥಿತಿಯ ತಳಮಳವನ್ನು ಚಿತ್ರಿಸುತ್ತದೆ ಎಂದು ತಿಳಿಯಬಹುದಾಗಿದೆ.

ಧರ್ಮದ ಹೆಸರಿನಲ್ಲಿ ಮಹಿಳೆಯ ಮೇಲೆ ನಡೆಯುವ ಶೋಷಣೆಯನ್ನು ಸಮಾಜದ ಸ್ಥಿತಿಗತಿಯನ್ನು 'ವಜ್ರಗಳು' ಕಾದಂಬರಿಯು ವ್ಯಕ್ತಪಡಿಸುವುದಾಗಿದೆ. ಹಾಗೂ ಪ್ರತಿನಿತ್ಯ ಐದು ಸಲ 'ನಮಾಜ್' ಮಾಡುವುದು ಧಾರ್ಮಿಕ ನಂಬಿಕೆಗೆ ಸಂಬಂಧಿಸಿದ ಮುಸ್ಲಿಂ ಸಮುದಾಯದ ಸಂಪ್ರದಾಯವಾಗಿದೆ. ಶಫಿಯುಲ್ಲ ಶಾಲೆಗೆ ಹೋಗುತ್ತೇನೆ ಎಂದರೆ ಮೈಯಲ್ಲಿ ಸೈತಾನ್ ಹಿಡಿದಿದೆ ಎಂಬಂತಹ ಕಲ್ಪನೆಗಳು ಶಿಕ್ಷಣವನ್ನು ಪಡೆಯದೇ ಇರುವ ಮನಸ್ಥಿತಿಯಲ್ಲಿ ಇರುವುದನ್ನು ಗಮನಿಸಬಹುದಾಗಿದೆ. ಹೆಣ್ಣಿನ ಮೇಲೆ ಆಗುವ ಮಾನಸಿಕ ಶೋಷಣೆಯನ್ನು ಅರ್ಥೈಸಿಕೊಳ್ಳದೇ ಹಲೀಮ ಮಗಳ ಪರಿಸ್ಥಿತಿಯನ್ನು ಕಂಡು ಮೌಲವಿಗಳೊಡನೆ ನೂಲನ್ನು ಮಂತ್ರಿಸಿ ತಂದು ಮಗಳ ಕೊರಳಿಗೆ ಕಟ್ಟಿಸಿ ಆಕೆಯ ಮನಸ್ಥಿತಿಯು ಬದಲಾಗದೇ ಇದ್ದಾಗ ಮೌಲವಿಗಳೇ ಹೇಳಿದರು 'ನಮ್ಮ ಈ ಮಾಮುಕೋಯ ಇದ್ದಾನಲ್ಲ? ಅವನ ಮೈಯಲ್ಲಿ ಒಂದು ಜಿನ್ನ (ಯಕ್ಷ) ಸೇರಿಕೊಂಡಿದೆಯಂತೆ ಅದು ಇಂತಹ ಕಾಯಿಲೆಗಳನ್ನೆಲ್ಲ ವಾಸಿ ಮಾಡುತ್ತದಂತೆ. ನಿಮ್ಮ ಹುಡುಗಿಯ ಮೈಯಲ್ಲಿ ಏನಾದರೂ ಸೇರಿಕೊಂಡಿದ್ದರೆ ಅದನ್ನು ಓಡಿಸುತ್ತದೆ. ಅವನನ್ನೊಮ್ಮೆ ಕರೆಸಿ ಲೆಕ್ಕ ನೋಡಿಸಿ'[18] ಎಂಬ ಸಲಹೆ ಇತ್ತ ಬಗೆಯು ಒಂದು ಹೆಣ್ಣಿನ ಮೇಲಾಗುತ್ತಿರುವ ಶೋಷಣೆಯನ್ನು ಗಮನಿಸದೆ ಮೂಢನಂಬಿಕೆಯನ್ನು ಹೇರಿರುವುದು ಕಂಡುಬರುತ್ತದೆ.

ನಫೀಸಾಳ ಹೆರಿಗೆಯ ಸಮಯದಲ್ಲಿ ಆಕೆಯನ್ನು ವೈದ್ಯರ ಬಳಿ ಕರೆದೊಯ್ಯದೇ ಸೂಲಗಿತ್ತಿಯನ್ನು ಕರೆಯಿಸಿ ಹೆರಿಗೆ ಕಷ್ಟಕರವೆಂದು ಹೇಳಿದಾಗ ತಾಯಿ ಹಲೀಮ 'ಸುಖವಾಗಿ ಹೆರಿಗೆಯಾದರೆ ಮಗುವನ್ನೆತ್ತಿಕೊಂಡು ಮೊಹಿಯುದ್ದೀನ್ ದರ್ಗಾಕ್ಕೆ ಹೋಗಿ ಬಿಳಿ ಮುಂಡು ಹಾಸೋಣ'[19] ಎಂದು ಹರಕೆ ಹೊತ್ತ ಬಗೆಯಲ್ಲಿ ಧರ್ಮದ ನಂಬಿಕೆಗಳಿಗೆ ಸಿಲುಕಿರುವುದು ತಿಳಿಯಬಹುದಾಗಿದೆ. ಕಲಕಿದ ಮನ ತಿಳಿಯಾದ ಬಳಿಕ ನಫೀಸಾ ತಾನೂ ಅಂದುಕೊಳ್ಳುತ್ತಾಳೆ. 'ಈ ಜಿನ್ನನಿಂದ ನನಗೆ ಬಿಡುಗಡೆಯೇ ಇಲ್ಲವೇನೊ'[20] ಎಂದು ಅಂದರೆ ಈ ಮಾನಸಿಕ ಶೋಷಣೆಯಿಂದ ತನಗೆ ಎಂದೆಂದಿಗೂ ಬಿಡುಗಡೆ ಇಲ್ಲವೇನೋ ಎಂದು ಚಿಂತಿಸುವ ಬಗೆಯನ್ನು ಸಾರಾ ಅವರ 'ವಜ್ರಗಳು' ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ.

## 2. ಬುರ್ಕಾ ಪದ್ಧತಿ:

ಮುಸ್ಲಿಂ ಸಮುದಾಯದಲ್ಲಿ ಹೆಣ್ಣು ಯೌವ್ವನಕ್ಕೆ ತಲುಪಿದ ನಂತರ ಪರದೆಯ ಹಿಂದೆ ಮರೆಯಾಗುವುದರ ಜೊತೆಗೆ ತನ್ನ ವ್ಯಕ್ತಿತ್ವದ ಗುಣಗಳನ್ನು ಸಹ ಮರೆಮಾಚಿಕೊಳ್ಳಬೇಕಾಗುತ್ತದೆ. ಪುರುಷ ಪ್ರಾಧಾನ್ಯದ ಚೌಕಟ್ಟಿನಲ್ಲಿರುವಂತಹ ಮುಸ್ಲಿಂ ಸಮುದಾಯದ ಮಹಿಳೆಯರು ಕೆಲವು ನಿರ್ಬಂಧಗಳಿಂದ ತಮ್ಮ ಬದುಕನ್ನು ಸಾಗಿಸುತ್ತಿರುವುದು ಕಂಡುಬರುತ್ತದೆ. ಕೌಟುಂಬಿಕ ವಲಯದಲ್ಲಿ ಗಂಡು ಹೇಳಿದ ಪ್ರಕಾರ ಹೆಣ್ಣು ಬುರ್ಕಾ ಧರಿಸದೇ ಹೊರಗೆ ಹೋಗುವಂತಿಲ್ಲ. ಪರಪುರುಷರೊಡನೆ ನೇರವಾಗಿ ಮಾತಾನಾಡುವಂತಿಲ್ಲ. ಪರದೆಯ ಹಿಂದೆ ಸರಿದು ಮಾತಾಡಬೇಕೆಂದು ಸಂಪ್ರದಾಯದ ಹೆಸರಿನಲ್ಲಿ, ಕೆಲವೊಮ್ಮೆ ಅತಿಯಾದ ಪ್ರೀತಿಯ ನೆಪದಲ್ಲಿ ಹೇರಿರುವುದನ್ನು ಗಮನಿಸಬಹುದಾಗಿದೆ.

ಬಾಲಿವುಡ್ ನಟಿ ಶಬಾನಾ ಅಜ್ಮಿ ಹೇಳುತ್ತಾರೆ. 'ಮುಸ್ಲಿಂ ಮಹಿಳೆಯರು ಬುರ್ಕಾ ಧರಿಸುವುದನ್ನು ಕಡ್ಡಾಯಗೊಳಿಸಿಲ್ಲ'[21] ಎಂದು, 'ಅಖಿಲ ಭಾರತ ಮುಸ್ಲಿಂ ವೈಯಕ್ತಿಕ ಕಾನೂನು ಮಂಡಳಿಯ ಹಿರಿಯ ಸದಸ್ಯ ಮತ್ತು ಲಖನೌದ ಐತಿಹಾಸಿಕ ತಿಲೇವಾಲಿ ಮಸೀದಿಯ'[22] ಇಮಾಮ್ ಮೌಲಾನಾ ಖಲೀದ್ ರಶೀದ್ ಫಿರಂಗಿಯವರು ಹೇಳುತ್ತಾರೆ. 'ಮುಸ್ಲಿಂ ಮಹಿಳೆಯರು ಬುರ್ಕಾ ಧರಿಸಬೇಕೆಂದು ಕುರಾನ್‌ನಲ್ಲಿ ಸ್ಪಷ್ಟವಾಗಿ ತಿಳಿಸಲಾಗಿದೆ'.[23] ಎಂದು, ಆದರೆ ಅಖಿಲ ಭಾರತ ಸಂಯುಕ್ತ ಮೋರ್ಚಾದ ಉಪಾಧ್ಯಕ್ಷ ಎಂ.ಎ ಸಿದ್ಧಿಖಿ ಅಭಿಪ್ರಾಯದಂತೆ 'ನಿರ್ದಿಷ್ಟ ಉಡುಗೆ ತೊಡುವಂತೆ ಇನ್ನೊಬ್ಬರಿಗೆ ಆದೇಶಿಸುವ ಅಧಿಕಾರ ಯಾರಿಗೂ ಇಲ್ಲ'[24] ಎನ್ನುತ್ತಾರೆ. ಈ ರೀತಿಯಾಗಿ ಬುರ್ಕಾ ಧರಿಸುವುದರ ಬಗೆಗೆ ಇರುವಂತಹ ಪ್ರತಿರೋಧವನ್ನು ಕಾಣಬಹುದಾಗಿದೆ.

ಬಂಡಾಯ ಕವಿ **ರಂಜಾನ್ ದರ್ಗಾ**ರವರು ತಮ್ಮ **'ಕಾವ್ಯ ಬಂತು ಬೀದಿಗೆ'** ಕವನ ಸಂಕಲನದಲ್ಲಿ,

"ಕಪ್ಪು ಬುರ್ಖಾಗಳು – ಪ್ರತಿಭಟನೆಯಿಲ್ಲ
ಕೆಂಪು ಬುರ್ಖಾಗಳು – ಕ್ರಾಂತಿಯಿಲ್ಲ
ಹಸಿರು ಬುರ್ಖಾಗಳು – ದಾರಿ ಸುಗಮವಿಲ್ಲ"[25]

ಎಂದು ಹೇಳುವ ಮೂಲಕ ಅವುಗಳ ಮಿತಿಯನ್ನು ಗುರುತಿಸುತ್ತಾರೆ. ಪ್ರತಿಭಟನೆಯಿಲ್ಲದ ಬುರ್ಖಾಗಳ ಬಗ್ಗೆ ದರ್ಗಾರವರು ಹೇಳುವುದು ಕಂಡುಬರುತ್ತದೆ.

**ಕೆ.ಷರೀಫಾ** ಅವರ **'ಬಿಡುಗಡೆ ಕವನಗಳು'** ಕವನ ಸಂಕಲನದ **'ಇವರೇ ನನ್ನವರು'** ಕವಿತೆಯಲ್ಲಿ,

"ಇದು ಬುರ್ಖಾ,
ಹಲವಾರು ಶತಮಾನಗಳಿಂದ
ನಾನು ಮರು ಮಾತಿಲ್ಲದೆ

ಮೌನವಾಗಿ
ಹೊತ್ತು ಬಂದ ಬುರ್ಖಾ"[26]

ಬುರ್ಖಾ, ಇಸ್ಲಾಂನ ಪದ್ಧತಿಯಾಗಿ ಸ್ತ್ರೀಯರ ಪ್ರಗತಿಗೆ ಅಡ್ಡಿಯಾಗಿ ಕಂಡುಬರುವುದು. ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳು ಈ ಬುರ್ಖಾ ಎಂಬ ವಸ್ತ್ರ ಸಂಹಿತೆಗೆ ಸಿಲುಕಿ ತಮ್ಮ ಮುಖ ಚಹರೆಯನ್ನು ಮರೆ ಮಾಡಿಕೊಳ್ಳುವುದರ ಜೊತೆಗೆ ತಮ್ಮ ಸೃಜನಶೀಲತೆಯ ಅಸ್ತಿತ್ವವನ್ನು ಮರೆ ಮಾಡಿಕೊಳ್ಳುವುದು ಕಂಡುಬರುತ್ತದೆ. ಪುರುಷ ಪ್ರಧಾನ ಸಮಾಜವು ಈ ನೆಲೆಯಿಂದ ಹೆಣ್ಣಿನ ಮೇಲೆ ನಿಯಮಗಳನ್ನು ರೂಪಿಸುತ್ತಾ ಬುರ್ಖಾದಿಂದ ಹೊರಬಾರದಂತೆ ಮಾಡಿರುವುದನ್ನು ಗುರುತಿಸಬಹುದಾಗಿದೆ. ಪರದೆ ಎಂಬುದು ಹೆಣ್ಣಿನ ಬದುಕಿನಲ್ಲಿ ಅಧೀನ ಸ್ಥಿತಿಯಲ್ಲಿ ಸಿಲುಕಿ ಪರ ಪುರುಷರೊಂದಿಗೆ ಮಾತಾನಾಡುವ, ಸಮಾಜದಲ್ಲಿ ಸ್ವಚ್ಛಂಧವಾಗಿ ಓಡಾಡುವ ಸ್ವಾತಂತ್ರ್ಯವನ್ನು ಕಸಿದುಕೊಂಡು ಆಕೆಯನ್ನು ಪರದೆಯ ಹಿಂದೆ ಸಿಲುಕಿಸುವ ಮೌಲ್ಯಗಳನ್ನು ಸಾಮಾಜಿಕವಾಗಿ ಹೇರಲ್ಪಡುವ ಪಿತೃ ಪ್ರಧಾನದ ಸಮಾಜದ ಮನಸ್ಥಿತಿಗಳು ಇರುವುದನ್ನು ಕಾಣಬಹುದಾಗಿದೆ.

**ಉದಾಹರಣೆಗೆ:** ಸಾರಾರವರ 'ಚಪ್ಪಲಿಗಳು' ಕತೆಯ ವಿವಾಹಿತ ಸಮೀರಳು ಬುರ್ಖಾ ಇಲ್ಲದೇ ಮನೆ ಬಾಗಿಲ ಗೇಟಿನ ಬಳಿ ನಿಂತಿರುತ್ತಾಳೆ. ಅದಕ್ಕೆ ಅವಳ ತಾಯಿ "ಈ ಹುಡುಗಿಗೆ ಏನಾಗಿದೆ. ಘೋಷ ಇಲ್ಲದೇ ಗೇಟಿನ ಬಳಿ ನಿಂತಿದ್ದಾಳೆ. ಈಕೆಗೆ ತಲೆ ಸರಿಯಿದ್ದಂತಿಲ್ಲ. ಇವಳ ತಂದೆ ನೋಡಿದರೆ ಎಲುಬು ಪುಡಿ ಪುಡಿ ಮಾಡದೇ ಬಿಡುವರೇ?"[27] ಎನ್ನುತ್ತಾಳೆ. ಇಲ್ಲಿ ಮುಸ್ಲಿಂ ಹುಡುಗಿ ಬುರ್ಖಾ ಇಲ್ಲದೆ ಮುಂದಿನ ಬಾಗಿಲಿಗೆ ನಿಂತರೆ ಅವಳ ತಂದೆಯ ಮಾತು ಮುರಿದಿದ್ದ ಸಮೀರಳ ಎಲುಬುಗಳನ್ನು ಪುಡಿ ಪುಡಿ ಮಾಡುವಷ್ಟರ ಮಟ್ಟಿಗೆ ಹಿಂಸಾತ್ಮಕವಾಗಿ ನಡೆಸಿಕೊಳ್ಳುವ ಪರಿಯು ಕಂಡುಬರುವುದು.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಮಹಮ್ಮದ್ ಖಾನ್ ತನ್ನ ಮಗಳ ಮನೆಗೆ ಬಂದಾಗ 'ಉಮ್ಮ ಹೇಗಿದ್ದಾರೆ? ಜಮೀಲ ಹೇಗಿದ್ದಾಳೆ? ಮದುವೆ ಯಾವಾಗ? ಎಂದು ನಾದಿರಾ ತನ್ನ ತಂದೆಯ ಜೊತೆಗೆ ನೇರವಾಗಿ ಸಂಭಾಷಣೆ ಮಾಡುತ್ತಾಳೆ'.[28] ಆದರೆ ಅವಳ ಅತ್ತೆಯೂ ಪರಪುರುಷರಿಗೆ ಮುಖವನ್ನು ತೋರಿಸಬಾರದು ಎಂಬ ನಂಬಿಕೆಯಿಂದ ಬಾಗಿಲಿನ ಪರದೆಯ ಹಿಂದೆ ನಿಂತು ಸೊಸೆಯ ತಾಯಿ ತಂಗಿಯರ ಕ್ಷೇಮ ಸಮಾಚಾರವನ್ನು ಕೇಳುವಂತಹುದು ಒಂದು ರೀತಿಯ ಧಾರ್ಮಿಕ ನಂಬಿಕೆಗೆ ನಿಲುಕಿದ ವಿಷಯವಾಗಿರುವುದು ಕಂಡುಬರುತ್ತದೆ.

'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಎಂಬುದು ಸಾರಾ ಅಬೂಬಕ್ಕರ್‌ರವರ ಬದುಕಿನ ವಿವರಗಳನ್ನು ಒಳಗೊಂಡಿರುವಂತಹುದು ಆಗಿದೆ. ಮುಸ್ಲಿಂ ಸಮುದಾಯದಲ್ಲಿ ಹೆಣ್ಣು ಮಕ್ಕಳು ತಮ್ಮ ನಿರ್ದಿಷ್ಟ ವಯೋಮಿತಿಯನ್ನು ತಲುಪಿದಾಗ ಬುರ್ಕಾ ಹಾಕಿಕೊಂಡು ಹೊರಗೆ ಹೋಗಬೇಕೆಂದು ಸುತ್ತಮುತ್ತಲಿನ ಸಮಾಜದಲ್ಲಿರುವ ಜನರು ನೇರವಾಗಿ, ಪರೋಕ್ಷವಾಗಿ ಹೇರುವುದು ಕಂಡುಬರುತ್ತದೆ. ಹತ್ತು ವರ್ಷ ದಾಟಿದ ಮುಸ್ಲಿಂ ಹುಡುಗಿಯೂ ಮನೆಯ ಹೊರಕೋಣೆಗೂ ಬರದಿದ್ದ ಆ ದಿನಗಳಲ್ಲಿ ಮುಸ್ಲಿಂ ಹುಡುಗಿಯೊಬ್ಬಳು ಬುರ್ಕಾ ಇಲ್ಲದೇ, ಕೊನೆಯ ಪಕ್ಷ ತಲೆಯ ಮೇಲೆ ಸೆರಗೂ ಎಳೆದುಕೊಳ್ಳದೆ ಹಿಂದೂ ಹುಡುಗಿಯರಂತೆ ಹೊರಗೆ ಹೋಗಬಾರದೆಂಬಂತಹ ನಿಯಮಗಳನ್ನು ಹೇರುವಂತಹ

ಮನಸ್ಥಿತಿಯ ಜನರು ಇರುವುದನ್ನು ಕಾಣಬಹುದಾಗಿದೆ. ಅಲ್ಲದೇ ಮುಸ್ಲಿಂ ಸಮುದಾಯದ ಪುರುಷರು ಶಾಲೆಗೆ ನಡೆದು ಹೋಗುತ್ತಿದ್ದಂತಹ ಹುಡುಗಿಗೆ ನೇರವಾಗಿ ಕೇಳಿಸುವಂತೆ ಈ ರೀತಿಯಲ್ಲಿ ಹೇಳುವರು.

"ಇಷ್ಟು ದೊಡ್ಡವಳಾಗಿ ಇನ್ನೂ ಈ ಹುಡುಗಿ ಶಾಲೆಗೆ ಹೋಗುತ್ತಿದ್ದಾಳಲ್ಲ?"

"ಬುರ್ಕಾ ಹಾಕಿಕೊಂಡಾದರೂ ಹೋಗಬಾರದೆ?"

"ಮುಸ್ಲಿಂ ಹುಡುಗಿಯರೆಲ್ಲಾ ಹೀಗೆ ಘೋಷಾ ಇಲ್ಲದೆ ಬೀದಿಯಲ್ಲಿ ತಿರುಗ ಹೊರಟರೆ ಇಸ್ಲಾಂ ಮತ ಉಳಿದಿತೇ"[29]

ಎಂಬಿತ್ಯಾದಿಯಾಗಿ ಧಾರ್ಮಿಕ ನಂಬಿಕೆಯ ನೆಲೆಯಿಂದ ಈ ರೀತಿಯ ವಸ್ತ್ರಸಂಹಿತೆಯನ್ನು ಹೆಂಗಸರಿಗೆ ಹೇರಿರುವುದು ತಿಳಿಯುತ್ತದೆ.

ಧಾರ್ಮಿಕ ನಂಬಿಕೆಯೂ ವ್ಯಕ್ತಿಯ ಸ್ವ ಪ್ರಜ್ಞೆಯ ವಿಚಾರಕ್ಕೆ ಸಿಲುಕಿದ್ದು. ಆದರೆ ವಸ್ತ್ರಸಂಹಿತೆ ಸಾಮೂಹಿಕ ಪ್ರಜ್ಞೆಯ ನಿಲುವುಗಳನ್ನ ಪಡೆದಿರುವುದನ್ನು ಕಾಣಬಹುದಾಗಿದೆ. ಘೋಷಾದ ಕುರಿತು ಇಸ್ಲಾಂ ಧರ್ಮದಲ್ಲಿ ಹೇಳಲ್ಪಟ್ಟಿದರೂ ಸಹ ಅದನ್ನು ಸ್ವೀಕರಿಸುವುದು ವ್ಯಕ್ತಿಯ ಮನಸ್ಸಿಗೆ ಸಂಬಂಧಿಸಿದ್ದು. ಆದರೆ ಕೆಲವು ಪುರುಷರು ಹೆಣ್ಣು ಮಕ್ಕಳಿಗೆ ಸ್ವೇಚ್ಛೆಯನ್ನು ಕೊಡದೇ ಇರಲು ಒಪ್ಪದ ಮನಸ್ಸುಗಳು ಮಾತ್ರ ಈ ರೀತಿಯ ವಸ್ತ್ರಸಂಹಿತೆಯನ್ನು ಹೇರಿರುವುದನ್ನು ಗುರುತಿಸಬಹುದಾಗಿದೆ. ಗಂಡು ಪ್ರಧಾನ, ಹೆಣ್ಣು ಅಧೀನ ಎಂಬ ನೆಲೆಯಿಂದ ಧರ್ಮದ ನಿಯಮಗಳನ್ನು ತಮಗೆ ಬೇಕಾದ ಹಾಗೆ ರೂಪಿಸಿಕೊಂಡು ಹೆಣ್ಣನ್ನು ಸದಾ ತಮ್ಮ ಹತೋಟಿಯಲ್ಲಿಟ್ಟುಕೊಳ್ಳುವ ದೃಷ್ಟಿಕೋನದಿಂದ ಚೌಕಟ್ಟನ್ನು ರೂಪಿಸಿ, ಆಕೆಯ ಅಸ್ತಿತ್ವ, ಅಭಿವ್ಯಕ್ತಿ, ಕ್ರಿಯಾಶೀಲತೆಗಳಿಗೆ ಸ್ವಾತಂತ್ರ್ಯವನ್ನು ನೀಡದೆ ಆಕೆಗೆ ಕೌಟುಂಬಿಕವಾಗಿ ನಿಯಂತ್ರಣ ಮಾಡುತ್ತಾ, ಪರಪುರುಷರೊಂದಿಗೆ ಮಾತಾಡಬಾರದು, ನಗಬಾರದು ಎಂಬ ನಿಲುವಿನಿಂದ ವಸ್ತ್ರಸಂಹಿತೆಯನ್ನು ಹೇರಿ ಆಕೆಯನ್ನು ಅಧೀನದಲ್ಲಿಟ್ಟುಕೊಳ್ಳುವ ಪರಿಯನ್ನು ಕಾಣಬಹುದಾಗಿದೆ. ಬುರ್ಕಾ ಇಲ್ಲದೆ ಹೊರಗೆ ತಿರುಗಾಡಿದರೆ ನರಕಕ್ಕೆ ಹೋಗುವರು ಎಂಬ ಕಲ್ಪನೆಯನ್ನು ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಹೆಣ್ಣಿನ ಮನಸ್ಸಿನಲ್ಲಿ ಹೇರಿರುವುದರಿಂದ ಹೆಣ್ಣು ಮಾನಸಿಕವಾಗಿ ಇದನ್ನು ಸ್ವೀಕರಿಸುವ ಅನಿವಾರ್ಯತೆಯ ಪ್ರಕ್ರಿಯೆಯು ಕಂಡುಬರುತ್ತದೆ.

ಸಾರಾ ಅವರ ಕಾದಂಬರಿಗಳಲ್ಲಿ ಪುರುಷ ಪ್ರಧಾನ ಸಮಾಜವು ಧರ್ಮದ ನಿಯಮಗಳನ್ನು ಹೆಣ್ಣಿನ ಮೇಲೆ ಹಿಂಸಾತ್ಮಕವಾಗಿ ವಿಧಿಸಿದರೆ, ಕೆಲವೊಮ್ಮೆ ಅದೇ ಸಮುದಾಯದ ಪಿತೃ ಸಂಸ್ಕೃತಿಯು ವಸ್ತ್ರಸಂಹಿತೆಯನ್ನು ವಿರೋಧಿಸುವುದು ಕಂಡುಬರುವುದು. ನಾದಿರಾಳ ಗಂಡ ರಶೀದ್ ತನ್ನ ಹೆಂಡತಿಯು ಬುರ್ಕಾ ಧರಿಸುವುದನ್ನು ಇಷ್ಟಪಡುವುದಿಲ್ಲ. ಹಕ್ಕಿಯಂತೆ ಅವಳು ತನ್ನ ಕುಟುಂಬದಲ್ಲಿ ಬಾಳಲಿ ಎಂಬ ಇಚ್ಛೆಯಿಂದ ಆಕೆಗೆ ವಸ್ತ್ರಸಂಹಿತೆಯನ್ನು ಹೇರದೆ ಇರುವುದನ್ನು ತಿಳಿಯಬಹುದಾಗಿದೆ. ಬುರ್ಕಾ ಧರಿಸುವುದು ಮುಸ್ಲಿಂ ಸಮುದಾಯದ ಹೆಂಗಸರ ಬದುಕಿನಲ್ಲಿ ಒಂದು ರೀತಿಯ ನಿರ್ಬಂಧದ ಚೌಕಟ್ಟಿನಲ್ಲಿ ಬಂಧಿಸಲು ವಿಧಿಸಿದಂತಹ ಬಗೆಯ ನಂಬಿಕೆಯಾಗಿ ಗುರುತಿಸಬಹುದು. ಈ ರೀತಿಯಲ್ಲಿ

ಹೆಂಗಸರು ಗಂಡಸರ ಹತೋಟಿಗೆ ಸಿಲುಕಿರುವುದು ಹಾಗೂ ಮಾನಸಿಕವಾಗಿ ಅದಕ್ಕೆ ಕ್ರಮೇಣ ಒಪ್ಪಿಗೆಯನ್ನು ಸೂಚಿಸುವುದು ಸಹ ಕಾಣಬಹುದಾಗಿದೆ.

### 3. ಸಿನಿಮಾ ನಿರ್ಬಂಧ:

ಸಾಮಾನ್ಯವಾಗಿ ಸಿನಿಮಾ ಎಂಬುದು ಮನರಂಜನೆಯ ಪ್ರಕ್ರಿಯೆ. ಹಲವು ಕೌಟುಂಬಿಕ ಒತ್ತಡಗಳ ನಡುವೆ ಮನಸ್ಸನ್ನು ಕ್ಷಣಕಾಲ ಇತರ ಚಟುವಟಿಕೆಗೆ ತೊಡಗಿಸುವಂತೆ ಸಿನಿಮಾವನ್ನು ನೋಡುವುದು ಚಟುವಟಿಕೆಯ ಕ್ರಿಯೆಯಾಗಿದೆ. ಸಿನಿಮಾ ನೋಡುವ ಬಗೆಯಲ್ಲಿ ಗಂಡು–ಹೆಣ್ಣೆಂಬ ಭೇದವಿಲ್ಲ. ಆದರೆ ಮುಸ್ಲಿಂ ಸಮುದಾಯದ ಪುರುಷರು ತಮ್ಮ ಹೆಣ್ಣು ಮಕ್ಕಳ ಮೇಲೆ ಸಿನಿಮಾ ನೋಡುವುದು ಮಹಾ ಅಪರಾಧವೆಂಬಂತೆ ಅವರಲ್ಲಿ ನಂಬಿಕೆಯನ್ನು ವಿಧಿಸಿರುವುದನ್ನು ಗಮನಿಸಬಹುದಾಗಿದೆ.

1981ರಲ್ಲಿ ಜಮಾತಿನ ತೀರ್ಮಾನದಂತೆ "ಮುಸ್ಲಿಂ ಸಮಾಜದ ಮಹಿಳೆಯರು ಸಿನಿಮಾ ನೋಡಕೂಡದು. ಈ ಫತ್ವಾ ಮೀರಿ ಸಿನಿಮಾಕ್ಕೆ ಹೋದರೆ ಅಂತಹ ಹೆಣ್ಣು ಮಕ್ಕಳ ಕುಟುಂಬಕ್ಕೆ ಸಮಾಜದಿಂದ ಬಹಿಷ್ಕಾರ ಹಾಕಲಾಗುವುದು ಮತ್ತು ಅವರಿಗೆ ದಂಡ ವಿಧಿಸಬಹುದಾಗಿದೆ". ಎಂದು ಫತ್ವಾ ಹೊರಡಿಸಿದರು. 'ನೌಜವಾನ್' ಕಮಿಟಿಯ ಹುಡುಗರು ಎಲ್ಲ ಸಿನಿಮಾ ಥೇಟರುಗಳ ಮುಂದೆ ಪಹರ್ ಮಾಡುತ್ತಿದ್ದರು. ಇದು ಉತ್ತರ ಕರ್ನಾಟಕದ ಗುಲ್ಬರ್ಗ, ಬಿಜಾಪುರ, ರಾಯಚೂರು, ಬೀದರ್, ಮತ್ತು ಹೈದರಾಬಾದ್‌ಗಳಲ್ಲಿ ಹೇರಲಾಯಿತು. ಬಿಜಾಪುರದ ನಜ್ಮಾ ಭಾಂಗಿ 'ಖುದಾಗವಾ' ಚಿತ್ರ ನೋಡಲು ಹೋದಾಗ ವಿರೋಧಿಸಿದ ಜಮಾತಿನ ಹುಡುಗರ ಮಾತು ಕೇಳಲಿಲ್ಲ. "ಸಿನಿಮಾ ನೋಡುವುದು ಅಥವಾ ಬಿಡುವುದು ತನ್ನ ವೈಯಕ್ತಿಕ ಸ್ವಾತಂತ್ರ್ಯ ಅದನ್ನು ನೀವು ತಡೆಯಲಾರಿರಿ" ಎಂದು ನಜ್ಮಾ ಹೇಳಿದರು. ಇದರಿಂದ ಕುಪಿತರಾದ ಹುಡುಗರು ಅವರನ್ನು ಮಚ್ಚಿನಿಂದ ಕೊಚ್ಚಿ ಹಾಕುವುದಾಗಿ ಹೇಳಿದಾಗ, ನಜ್ಮಾ ಭಾಂಗಿಯವರು ತಕ್ಷಣವೇ ಪೋಲಿಸ್ ಸ್ಟೇಷನ್‌ಗೆ ಓಡಿ ಹೋಗಿ ಆಶ್ರಯ ಪಡೆದರು. "ಅವರನ್ನು ಹೊರ ಹಾಕಿ, ಇಲ್ಲವಾದರೆ ಪೋಲಿಸ್ ಸ್ಟೇಷನ್‌ಗೆ ಬೆಂಕಿಯಿಡುತ್ತೇವೆಂದು ಹುಡುಗರು ಹಟ ಮಾಡಿದರು. ಆದರೆ ಪೋಲಿಸ್‌ರು ಅವರನ್ನೂ ಚದುರಿಸಿದರು. ಅನಂತರ ಆ ಜಮಾತಿನವರು ನಜ್ಮಾರವರ ಮನೆಗೆ ವಿದ್ಯುತ್ ಸಂಪರ್ಕ, ನೀರಿನ ಸಂಪರ್ಕ ಕಡಿದು ಹಾಕಿ ಹಿಂಸೆ ನೀಡಿದರು.[30] ಇಲ್ಲಿ ಮೂಲಭೂತವಾದಿಗಳು ಮುಸ್ಲಿಂ ಮಹಿಳೆಯರಿಗೆ ಶತ್ರುಗಳಾಗಿರುವುದು ಕಂಡುಬರುತ್ತದೆ.

ಸಿನಿಮಾ ನೋಡುವುದರಿಂದ ಹೆಣ್ಣು ಮಕ್ಕಳು ಹಾಳಾಗುವರೆಂದು ಮುಸ್ಲಿಂ ಸಮಾಜದ ಅತೀ ಧಾರ್ಮಿಕ ಮನಸ್ಸುಗಳ ಚಿಂತನೆ, ಹೆಣ್ಣು ಮಕ್ಕಳ ಬದುಕಿನಲ್ಲಿ ಎಷ್ಟೇ ದುಡಿದು ದಣಿವಾದರೂ ಬದಲಾವಣೆಯಲ್ಲಿ ಮನರಂಜನೆಯಲ್ಲಿ ಕತ್ತಲೆಯ ಕೋಣೆಯಲ್ಲಿ ಬದುಕನ್ನು ನಡೆಸುವುದನ್ನು ಕಾಣಬಹುದಾಗಿದೆ. ಹೆಣ್ಣು ಎಂದರೆ ಸದಾ ಕೌಟುಂಬಿಕ ಕೆಲಸಗಳನ್ನು ಮಾಡುತ್ತಾ ಆಕೆ ಮಕ್ಕಳ ಲಾಲನೆ–ಪಾಲನೆ, ಹಿರಿಯರ ಸೇವೆ, ಗಂಡನ ಆಸೆಗಳನ್ನು ಪೂರೈಸುವುದು ದಿನವಿಡೀ ಮನೆಯ ಕೆಲಸಗಳನ್ನು ಮಾಡುತ್ತಾ ಆಕೆ ಬದುಕನ್ನು ನಡೆಸಬೇಕು. ಹೊರತು ಆಕೆ ಗಂಡಸರಂತೆ ಮನರಂಜನೆಗಾಗಿ ಸಿನಿಮಾವನ್ನು ನೋಡುವ ಅವಕಾಶವನ್ನು ಕಸಿದುಕೊಳ್ಳಲಾಯಿತು. ಸಿನಿಮಾ ನೋಡುವುದಕ್ಕೆ ನಿರ್ಬಂಧವನ್ನು ಹೇರಿದ ಪುರುಷ ಪ್ರಧಾನದ ಈ ಕಲ್ಪನೆಯನ್ನು ಹೆಣ್ಣಿನ ನೆಲೆಯಿಂದ ಆಲೋಚಿಸಿದಾಗ

ತಪ್ಪು ಗ್ರಹಿಕೆಯಾಗಿರುವುದು. ಹೆಣ್ಣು ಬರೀ ಕೆಲಸವನ್ನು ಮಾಡುವ ಯಂತ್ರವಲ್ಲ. ಆಕೆಗೂ ಮನಸ್ಸಿದೆ. ಆಕೆಗೂ ಇತರ ಕ್ರಿಯಾಶೀಲತೆಯ ಚಟುವಟಿಕೆಯೂ ಮುಖ್ಯ ಎಂಬುದಾಗಿ ಈ ಪುರುಷ ಸಮಾಜದ ಮನಸ್ಸುಗಳು ಅರಿಯದೇ ಇರುವುದನ್ನು ತಿಳಿಯುವುದು ಮುಖ್ಯವಾಗುತ್ತದೆ.

ಮುಸ್ಲಿಂ ಸಮುದಾಯದಲ್ಲಿ ಸಿನಿಮಾ ನಿರ್ಬಂಧವನ್ನು ಹೇರುವಂತಹ ಮನಸ್ಸುಗಳು ಹೆಚ್ಚಾಗಿ ಇರುವುದು ಕಂಡುಬರುತ್ತದೆ. ಹೆಣ್ಣಿಗೆ ಸ್ವಾತಂತ್ರ್ಯವನ್ನು ನೀಡಿದರೆ ಅವರು ಪ್ರಾಪಂಚಿಕ ಜ್ಞಾನವನ್ನು ಪಡೆದು ಹೊರಗಿನ ವಿಚಾರಗಳನ್ನು ತಿಳಿಯುತ್ತಾ ತಪ್ಪು ಹಾದಿಯನ್ನು ಹಿಡಿಯುವರು ಎಂಬಂತಹ ಕಲ್ಪನೆಯು ಪರಂಪರೆಯ ಸಂಪ್ರದಾಯದ ಮನಸ್ಸುಗಳ ದೃಷ್ಟಿಯಲ್ಲಿ ಇತ್ತು. ಆದರೆ ಸಾರಾ ಅವರು ತಮ್ಮ ಕಾದಂಬರಿಗಳಲ್ಲಿ ಹೆಣ್ಣಿಗೆ ಸಿನಿಮಾವನ್ನು ನೋಡಲು ಈ ಧರ್ಮವು ನಿಯಮವನ್ನು ರೂಪಿಸಿ ಅವಕಾಶ ಕಸಿದುಕೊಂಡಿರುವುದರಿಂದ ತಾನು ಕೂಡ ಸಿನಿಮಾ ನೋಡಬಾರದೆಂಬ ತೀರ್ಮಾನ ಕೈಗೊಂಡ ಪುರುಷರ ಸಹಜ ವಿಚಾರಗಳನ್ನು ಚಿತ್ರಿಸಿರುವರು. ನಿರ್ಬಂಧಗಳನ್ನು ಮೀರುವಂತಹ ಆಧುನಿಕತೆಯ ಸಂದರ್ಭದಲ್ಲಿ ಹೇಗೆ ವ್ಯಕ್ತಿಯ ವೈಚಾರಿಕ ಪ್ರಜ್ಞೆಯಿಂದ ಆಲೋಚಿಸಿ ತೀರ್ಮಾನವನ್ನು ಕೈಗೊಳ್ಳುವರು ಎಂಬುದಾಗಿ ತಿಳಿಯಬಹುದಾಗಿದೆ. ನಿರ್ಬಂಧ ಎಂಬುದು ಹೆಣ್ಣಿನ ಬದುಕಿನಲ್ಲಿ ವಿವಿಧ ಕಡೆಯಿಂದ ವಿಧಿಸಿರುವುದು ಕಂಡುಬರುತ್ತದೆ. ಗಂಡು ವಿಧಿಸಿದ ನಿರ್ದಿಷ್ಟ ವೃತ್ತದ ಒಳಗೆ ಇದ್ದು ತನ್ನ ಆಸೆ ಆಕಾಂಕ್ಷೆಗಳನ್ನು ಅದುಮಿಟ್ಟು ತನ್ನ ಬದುಕನ್ನು ನಡೆಸುವ ಮಹಿಳೆಯರ ಸ್ಥಿತಿಯು ಕಂಡುಬರುತ್ತದೆ. ಮುಸ್ಲಿಂ ಸಮುದಾಯದಲ್ಲಿ ನಿರ್ಬಂಧ ಎಂಬುದು ಹೆಂಗಸರಿಗೆ ವಿಧಿಸಲ್ಪಟ್ಟಿರುತ್ತದೆಯೇ ಹೊರತು ಗಂಡಸರಿಗೆ ವಿಧಿಸಿರುವುದಿಲ್ಲ. ಗಂಡಸರು ತಮಗೆ ಬೇಕಾದ ಹಾಗೆ ಯಾವುದೇ ನಿರ್ಬಂಧವಿಲ್ಲದೇ ಸ್ವೇಚ್ಛೆಯಿಂದ ಸಿನಿಮಾಕ್ಕೆ ಹೋಗುವಂತಹ ಅವಕಾಶಗಳನ್ನು ಹೊಂದಿರುವುದು ಕಂಡುಬರುತ್ತದೆ.

ಪುರುಷರು ಸಂಪ್ರದಾಯದ ಮೂಲಕ ನಿರ್ಬಂಧನೆಗಳನ್ನು ಮಹಿಳೆಯರ ಮೇಲೆ ಹೇರಿರುತ್ತಾರೆ. ತಮ್ಮ ಅಧಿಪತ್ಯವನ್ನು ಸ್ಥಾಪಿಸಲು ಹೊರಗೆ ಹೋಗದಂತೆ ತಡೆಯುತ್ತಾರೆ. ಸಿನಿಮಾ ನೋಡುವುದಕ್ಕೂ ನಿರ್ಬಂಧಿಸುತ್ತಾರೆ. "ನಮ್ಮ ಮನೆತನದ ಹೆಂಗಸರು ಈವರೆಗೆ ಸಿನಿಮಾ ನೋಡಿದ್ದಾರೆಯೇ? ಇವರಿಗೆಲ್ಲಾ ಸಿನಿಮಾ ತೋರಿಸಿ ಕುಟುಂಬದ ಮಾರ್ಯಾದೆ ತೆಗೆದೆಯಲ್ಲ? ನೀವೆಲ್ಲರೂ ನರಕದ ಕೊಳ್ಳಿಗಳೇ ಆಗಿ ಹೋದಿರಿ"[31] ಎನ್ನುವ ಹಸನ್ ಬ್ಯಾರಿ ಹಿಂದೊಮ್ಮೆ ಗಂಡ ಶಬ್ಬಿರ್ ಸಿನಿಮಾಕ್ಕೆ ಹೋಗೋಣವೆಂದಾಗ ಸಮಿದಾ "ಅಪ್ಪ ಚರ್ಮ ಸುಲಿದಾರು?"[32] ಎನ್ನುತ್ತಿದ್ದಳು. 'ಸಮೀರಳಿಗೆ ಇಂತಹದೆಲ್ಲಾ ರುಚಿ ಹತ್ತಿಸಿದರೆ ಅವಳ ಬುದ್ಧಿ ಹಾಳಾಗುತ್ತದೆ. ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು. ಬೇಕಾದಾಗ ಉಪಯೋಗಿಸಿ, ಬೇಡವಾದಾಗ ಮೂಲೆಯಲ್ಲಿ ಬಿಟ್ಟು ಬಿಡಬೇಕು. ಅದು ಬಿಟ್ಟು ತಲೆಯ ಮೇಲೆ ಇಟ್ಟುಕೊಂಡರೆ ಹೇಗೆ'?[33] ಎನ್ನುವ ಹಸನ್ ಬ್ಯಾರಿಯಂತಹ ಮನಸ್ಸುಗಳು ಈ ಸಮಾಜದಲ್ಲಿ ಇರುವುದು ಕಂಡುಬರುತ್ತದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ರಶೀದ್ ಶುಕ್ರವಾರದ ಎಲ್ಲಾ ನಮಾಜ್‌ಗಳನ್ನು ಮುಗಿಸಿ ಸಾಯಂಕಾಲ ಮಾತ್ರ ಮಣಿಪುರಕ್ಕೆ ಹೋಗಿ ಸಿನಿಮಾ ನೋಡಿ ಬರುವುದನ್ನು ಕಂಡಂತಹ ಹೆಂಡತಿ ನಾದಿರಾ ಒಮ್ಮೆ ಕೇಳಿದ್ದಳು 'ಸಿನಿಮಾ ಅಂದರೆ ಹೇಗಿರುತ್ತದೆ? ಒಮ್ಮೆ ನನ್ನನ್ನೂ ಕರೆದುಕೊಂಡು ಹೋಗಿ'[34] ಎಂದು ಸಿನಿಮಾ ಹೇಗಿರುತ್ತದೆ ಎಂಬ ಕಲ್ಪನೆಯೇ ಇಲ್ಲದಂತಹ ಹೆಣ್ಣು ಕೇಳಿದಾಗ ಆಕೆಯ ಮನಸ್ಥಿತಿಯನ್ನು ತಿಳಿಯಬಹುದಾಗಿದೆ. ರಶೀದ್ ಒಮ್ಮೆ ನಿನ್ನನ್ನು ಸಿನಿಮಾಕ್ಕೆ ಕರೆದೊಯ್ಯುತ್ತೇನೆ ಎಂದಾಗ ಧಾರ್ಮಿಕ ನಂಬಿಕೆಗೆ ಸಿಲುಕಿದ ನಿಯಮಗಳಲ್ಲಿ ಬಂಧಿಯಾದಂತಹ ನಾದಿರಾ ಇದರಿಂದ ಹೊರಗೆ ಬಾರಲು

ಸಾಧ್ಯವಿಲ್ಲದೇ ಇರುವಾಗ 'ಅಯ್ಯೋ ಬೇಡಾರೀ, ನಾನು ಸುಮ್ಮನೆ ತಮಾಷೆಗೆಂದೆ, ಸಿನಿಮಾ ನೋಡಬೇಕೆಂದು ನಾನೇನಾದರೂ ಸಿನಿಮಾಕ್ಕೆ ಬಂದರೆ ನಾಳೆ ಊರಿಡೀ ಸುದ್ದಿಯಾಗಿ ಜನರು ನಮ್ಮ ಮನೆಯ ಮಹಡಿಗೆ ಕಲ್ಲೆಸೆಯುತ್ತಾರೆ. ಬೇಡಪ್ಪಾ ಅದೆಲ್ಲಾ. ನೀವು ಹೋಗಿ ಬನ್ನಿ'[35] ಎಂದು ಈ ರೀತಿಯಾಗಿ ಹೇಳುವಾಗ ನಾದಿರಾಳ ಧ್ವನಿಯಲ್ಲಿ ನಿರಾಸೆಯ ಛಾಯೆಯು ಇರುವುದು ವ್ಯಕ್ತವಾಗುತ್ತದೆ. ಮುಸ್ಲಿಂ ಸಮುದಾಯದ ಹುಡುಗಿಯರು ಇತರ ಹುಡುಗರಂತೆ ಒಂದು ಸಿನಿಮಾಕ್ಕೂ ಹೋಗುವಂತಹ ಸ್ವಾತಂತ್ರ್ಯವಿಲ್ಲದಿರುವುದು ಕಂಡುಬರುತ್ತದೆ.

1981ರಲ್ಲಿ ಜಮಾತಿನ ತೀರ್ಮಾನದಂತೆ 'ಮುಸ್ಲಿಂ ಸಮಾಜದ ಮಹಿಳೆಯರು ಸಿನಿಮಾ ನೋಡಕೂಡದು. ಈ ಫತ್ವಾ ಮೀರಿ ಸಿನಿಮಾಕ್ಕೆ ಹೋದರೆ ಅಂತಹ ಹೆಣ್ಣು ಮಕ್ಕಳ ಕುಟುಂಬಕ್ಕೆ ಸಮಾಜದಿಂದ ಬಹಿಷ್ಕಾರ ಹಾಕಲಾಗುವುದು ಮತ್ತು ಅವರಿಗೆ ದಂಡ ವಿಧಿಸಲಾಗುವುದು'[36] ಎಂಬುದಾಗಿ ತೀರ್ಮಾನ ಹೊರಡಿಸಿರುವ ಬಗೆಯನ್ನು ತಿಳಿಯಬಹುದಾಗಿದೆ.

'ವಜ್ರಗಳು' ಎಂಬ ಕಾದಂಬರಿಯಲ್ಲಿ ನಫೀಸಾಳಿಗೆ ಸಿನಿಮಾ ಹೇಗಿರುತ್ತದೆ ಎಂಬ ಕಲ್ಪನೆಯು ಇಲ್ಲದೆ ಇರುವಂತಹ ಸಂದರ್ಭದಲ್ಲಿ ಆಕೆಯ ಮಗಳು ಸೆಲ್ಮಾ ತನ್ನ ಗಂಡನೊಡನೆ ಸಿನಿಮಾಕ್ಕೆ ಹೋಗಿ ಬಂದು ಕತೆಯನ್ನು ತನ್ನ ತಾಯಿಗೆ ವಿವರಿಸುತ್ತಿದ್ದಳು. ಮುಸ್ಲಿಂ ಸಮುದಾಯದ ಗಂಡಸರು ಒಂದು ದಡೆ ನಿರ್ಬಂಧವನ್ನು ಹೇರಿದರೆ, ಮತ್ತೊಂದೆಡೆ ಅದನ್ನು ಮೀರುವ ಪ್ರಯತ್ನವು ಸಹ ಕಂಡುಬರುತ್ತದೆ.

### 4. ಸಂತಾನಹರಣ ಚಿಕಿತ್ಸೆ ನಿಷೇಧ:

ಹೆಣ್ಣಿನ ದೇಹ, ಗರ್ಭ, ಬಸಿರು, ಬಾಣಂತನಗಳೆಲ್ಲ ಅವಳ ದೇಹದ ಕ್ರಿಯೆಗಳಾದರೂ ಸಹಿತ ಅದರ ಸಂಪೂರ್ಣ ನಿಯಂತ್ರಕ ಶಕ್ತಿ ಪುರುಷನಾಗಿರುತ್ತಾನೆ. ಮುಸ್ಲಿಂ ಸಮುದಾಯದಲ್ಲಿ ಹೆಣ್ಣು ಯೌವ್ವನದ ವಯೋಮಿತಿಗೆ ಬರುವ ಮುಂಚೆಯೇ ಮದುವೆಯಾಗಿ ಒಂದು ವರ್ಷ ತುಂಬುವುದರೊಳಗೆ ಗರ್ಭವನ್ನು ಧರಿಸಿ ಮಗುವನ್ನು ಹಡೆಯುವಳು. ಇದೇ ರೀತಿಯಾಗಿ ನಿರಂತರವಾಗಿ ತಾಯ್ತಾನವನ್ನು ಪಡೆದಾಗ ಆಕೆಯ ದೇಹ ಸ್ಥಿತಿಯು ಹದಗೆಟ್ಟು ಹೇರಿಗೆ ಮಾಡಿಸುವ ಸೂಲಗಿತ್ತಿಯು ಚಿಕಿತ್ಸೆ ಮಾಡಿಸಬಾರದೆ ಎಂದು ಸಲಹೆ ನೀಡಿದ್ದನ್ನು ಗಂಡನಿಗೆ ತಿಳಿಸಿದಾಗ ಅವರು ಸಂತಾನಹರಣ ಚಿಕಿತ್ಸೆಯನ್ನು ನಿಷೇಧಿಸುವುದು ಕಂಡುಬರುತ್ತದೆ.

'ಸಹನಾ' ಕಾದಂಬರಿಯಲ್ಲಿ ನಸೀಮ ನಿರಂತರವಾಗಿ ತಾಯ್ತಾನವನ್ನು ಪಡೆದು ಆರೋಗ್ಯ ಹದಗೆಟ್ಟಾಗ ಸೂಲಗಿತ್ತಿಯು ಈ ರೀತಿಯಲ್ಲಿ ಹೇಳುವಳು. 'ಏನಮ್ಮ ಇಷ್ಟು ಚಿಕ್ಕ ಹುಡುಗಿಗೆ ಹೀಗೆ ಮೇಲಿಂದ ಮೇಲೆ ಹೇರಿಗೆಯಾಗುತ್ತಿದ್ದರೆ ಆಕೆಯ ದೇಹ ಯಾಕಾದೀತು? ಈ ಮುಸ್ಲಿಮರಿಗೆ ಎಷ್ಟು ಹೇಳಿದರೂ ಬುದ್ಧಿ ಬರದು'[37] ಎಂದು ಆಕೆ ಸಕೀನಳೊಡನೆ ತನ್ನ ಅಸಮಾಧಾನ ವ್ಯಕ್ತ ಪಡಿಸಿದಳು. ಸಕೀನ ಮುಖ ಚಿಕ್ಕದು ಮಾಡಿಕೊಂಡು ಮಗಳ ಬಳಿ ನಿಂತು, 'ಮಕ್ಕಳಾಗುವುದು ನಮ್ಮ ಕೈಯಲ್ಲಿದೆಯೇ? ಮಕ್ಕಳನ್ನು ಕೊಡುವುದು ದೇವರು ಅವನು ಕೊಡುವಾಗ ನಮ್ಮಿಂದ ಬೇಡ ಎನ್ನಲಾಗುತ್ತದೆಯೇ?[38] ಎಂದಳು. ಅದಕ್ಕೆ ಸೂಲಗಿತ್ತಿಯು ಈ ರೀತಿಯಲ್ಲಿ ಸಕೀನಳಿಗೆ. 'ಹಾಗೆ ಹೇಳುವುದಕ್ಕೆ ಮಾತ್ರ ನಿಮಗೆ ಗೊತ್ತು. ಆಡುತ್ತಿರುವ ಚಿಕ್ಕ ಹುಡುಗಿಯರಿಗೆ ಮದುವೆ ಮಾಡುವುದು; ಮೇಲೆ ಮೇಲೆ ಆಕೆಗೆ ಮೂರು ನಾಲ್ಕು ಮಕ್ಕಳಾಗಿ ಕಾಯಿಲೆಯಲ್ಲಿ ನರಳುವುದು. ಇದು ತಾನೇ ನಿಮ್ಮ ಹಣೆ ಬರಹ? ಈಗ ಮಕ್ಕಳಾಗದ ಹಾಗೆ ಮಾಡಲು ಎಷ್ಟೊ ವಿಧಾನಗಳಿವೆ. ಒಮ್ಮೆ ಇವಳನ್ನು ಕರೆದುಕೊಂಡು ನಮ್ಮ ಆಸ್ಪತ್ರೆಗೆ ಬನ್ನಿ ನಮ್ಮ ಡಾಕ್ಟರು ಎಲ್ಲ ಹೇಳಿಕೊಡ್ತಾರೆ ಎಂದು ಸಂತಾನಹರಣ ಚಿಕಿತ್ಸೆಯ ಬಗೆಗೆ ಮಾಹಿತಿಯನ್ನು ನೀಡುವಂತಹ ಸೂಲಗಿತ್ತಿಯ

ವೈಚಾರಿಕ ಪ್ರಜ್ಞೆಯನ್ನು ತಿಳಿಯಬಹುದಾಗಿದೆ. ಮಗುವನ್ನು ದಯಪಾಲಿಸುವುದು ದೇವರು. ಅದನ್ನು ಮೀರಿದರೆ ನರಕಕ್ಕೆ ಸಿಲುಕುವರು'[39] ಎಂಬ ಮೂಢ ನಂಬಿಕೆಯಿಂದ ಚಿಂತಿಸುವ ಮನಸ್ಸುಗಳು ಇರುವುದು ಕಂಡುಬರುತ್ತದೆ.

ರೋಸಿಯ ಹೆರಿಗೆಯಲ್ಲಿ ರಕ್ತಸ್ರಾವವಾಗಿ ನಿತ್ರಾಣಳಾದಂತಹ ನಸೀಮಳು ನಂತರ ತಾಯಿಯ ಮನೆಯಲ್ಲಿ ಕೊಂಚ ಮೈ ತುಂಬಿಕೊಂಡಿದ್ದಳು. ಆದರೆ ಗಂಡನ ಮನೆಗೆ ಬಂದಾಗ ಯಥಾಸ್ಥಿತಿಯಂತೆ ಪುನಃ ಸಣ್ಣಗೆ ಮೊದಲಿನಂತಾಗಿದ್ದಳು. ಮತ್ತೇ ವಾಂತಿ ಪ್ರಾರಂಭವಾದ ಮೇಲೆ ಎದ್ದು ಕುಳಿತುಕೊಳ್ಳಲೂ ಶಕ್ತಿ ಇಲ್ಲದಂತಾದಾಗ ಸೂಲಗಿತ್ತಿ ಹೇಳಿದ ಮಾತುಗಳು ನೆನಪಾಗಿ ನಸೀಮ ತನ್ನ ಗಂಡ ಪಾಷನಿಗೆ ಸಂತಾನಹರಣ ಚಿಕಿತ್ಸೆ ಬಗ್ಗೆ ಅರಿವು ಮೂಡಿಸಿದಾಗ ಆತ ಆಕೆಯ ಮಾತನ್ನು ಕೇಳಿ ನಕ್ಕು ಬಿಟ್ಟಿದ್ದನು. 'ಅದೆಲ್ಲ ನಮ್ಮಂತಹವರಿಗಲ್ಲ, ಒಂದು ಮಾಡಲು ಹೋಗಿ ಇನ್ನೊಂದಾಗುತ್ತದೆ. ಮಕ್ಕಳಾಗದ ಹಾಗೆ ಮಾಡಿದರೆ ದೇಹಕ್ಕೆ ಬೇರೇನಾದರೂ ಕಾಯಿಲೆ ಬಂದು ಬಿಡುತ್ತದೆಯಂತೆ. ಅದೂ ಅಲ್ಲದೇ ನಾವು ಮುಸ್ಲಿಂಮರು. ನಾವು ಅದನ್ನೆಲ್ಲ ಮಾಡಬಾರದು. ಮೊನ್ನೆ ಮಸೀದಿಯಲ್ಲಿ ನಮ್ಮ ಖಾಜಿ ಸಾಹೇಬರು ಹಾಗೆ ಮಾಡಬಾರದೆಂದು ಸಾರಿ ಸಾರಿ ಹೇಳಿದ್ದಾರೆ'.[40] ಎಂದು ವ್ಯಕ್ತಪಡಿಸಿದನು. ನಿಶ್ಯಕ್ತಿಯಿಂದ ಬಳಲಿದ ಹೆಣ್ಣಿನ ಮನಸ್ಥಿತಿಯನ್ನು ತಿಳಿಯದೇ ಹೋದ ಗಂಡನ ಮೇಲೆ ಸಿಟ್ಟು ಬಂತು. 'ಗಂಡಸರಿಗೇನು? ತಮ್ಮ ಆಸೆಯನ್ನು ತೀರಿಸಿಕೊಂಡು ಹೊರಟು ಹೋಗುತ್ತಾರೆ. ಒಂಭತ್ತು ತಿಂಗಳು ಹೊಟ್ಟೆಯಲ್ಲಿಡುವ ಕಷ್ಟವಾಗಲಿ, ಹೆರಿಗೆಯ ನೋವಾಗಲಿ ಈ ಗಂಡಸರಿಗೆ ಎಂದಾದರೂ ಮನವರಿಕೆಯಾದೀತೇ? ಇರುವ ಮಗುವಿಗೆ ಒಂದು ತೊಟ್ಟು ಹಾಲೂ ಕೊಡದವರಿಗೆ ಪುನಃ ಪುನಃ ಮಕ್ಕಳು ಯಾಕೆ ಬೇಕು? ತನಗೆ ಮಗುವಾಗುವ ಬದಲು ಆ ಹಿಂದಿನ ಮನೆಯ ಸೊಸೆಗಾದರೂ ಮಗುವಾಗಬಾರದಿತ್ತೇ?'[41] ಎಂದು ನಸೀಮ ತನ್ನ ನೋವುಗಳನ್ನು ವ್ಯಕ್ತಪಡಿಸಿದಳು. ಅಂದರೆ ಮಗುವಿನ ಬಗ್ಗೆ ತಂದೆಗೆ ಅಧಿಕಾರವಿರುತ್ತದೆಯೇ ಹೊರತು, ತಾಯಿಗೆ ತನ್ನ ಮಗುವಿನ ಮೇಲೆ ಯಾವುದೇ ಅಧಿಕಾರವು ಇರುವುದಿಲ್ಲ. ತನಗೆ ಇಷ್ಟವಿಲ್ಲದಿದ್ದರು ಆಕೆ ಮಗುವನ್ನು ಪಡೆಯುವುದು ಕಂಡುಬರುತ್ತದೆ. ಈ ರೀತಿಯ ಸಂತಾನಹರಣ ಚಿಕಿತ್ಸೆಯನ್ನು ನಿಷೇಧಿಸುವಂತಹ ಮನಸ್ಥಿತಿಯ ಮನಸ್ಸುಗಳು ಈ ಸಮಾಜದಲ್ಲಿ ಇರುವ ಬಗೆಯು ಕಂಡುಬರುತ್ತದೆ.

ತನ್ನಿಂದಾಗಿಯೇ ಇವಳು ಇಷ್ಟು ಕಷ್ಟ ಪಡಬೇಕಾಯಿತು. ತಾನು ಯಾರಾದರೂ ವೈದ್ಯರ ಬಳಿ ಹೋಗಿ ಸಲಹೆ ಪಡೆದಿದ್ದರೆ, ಬೇಕಾದ ಮುಂಜಾಗ್ರತೆ ತೆಗೆದುಕೊಂಡಿದ್ದರೆ ಇವಳು ಹೀಗೆ ಕಷ್ಟಪಡಬೇಕಾಗಿರಲಿಲ್ಲ ಎಂಬುದಂತೂ ಆತನ ತಲೆಗೆ ಹೊಳೆಯುವಂತಿರಲಿಲ್ಲ. ಹೆಂಗಸರಿರುವುದೇ ಮಕ್ಕಳನ್ನು ಹಡೆಯುವುದಕ್ಕೆ: ಮಕ್ಕಳಾಗದಂತೆ ಮಾಡಿದರೆ ತಾವೆಲ್ಲ ನರಕಕ್ಕೆ ಹೋಗಬೇಕಾದೀತೆಂದು ಖಾಜಿ ಸಾಹೇಬರು ಆಗಾಗ ಹೇಳುತ್ತಾ ಇರುತ್ತಾರಲ್ಲ? ಅಂತಹ ಕೆಲಸ ಮಾಡಿ ತಾವೆಲ್ಲ ನರಕದ ಕೊಳ್ಳಿಗಳಾಗಬಾರದು. ಮಕ್ಕಳನ್ನು ಕೊಡುವವನು ದೇವರು ಅವುಗಳನ್ನು ರಕ್ಷಿಸುವವನೂ ಆತನೇ. ಆದ್ದರಿಂದ ತಾವೇನೂ ಆ ವಿಷಯದಲ್ಲಿ ತಲೆಕೆಡಿಸಿಕೊಳ್ಳಬೇಕಾಗಿಲ್ಲ ಎಂಬುದು ಆತನ ಭಾವನೆ. 17 ವರ್ಷ ತುಂಬುವುದರೊಳಗೆ ಮೂರು ಬಾರಿ ಗರ್ಭಿಣಿಯಾಗಿ ಒಂದು ಮಗುವನ್ನು ಕಳೆದುಕೊಂಡು ಸರಿಯಾದ ಹಾಲು, ಹಣ್ಣು, ಆಹಾರವಿಲ್ಲದೆ ಆದಾವುದೊ ರೋಗ ಆಕೆಯನ್ನು ಒಳಗೆ ಭಾಧಿಸುತ್ತಿರಬಹುದೆಂಬ ಕಲ್ಪನೆ ಕೂಡ ಆತನ ಬಳಿ ಸುಳಿಯುವಂತೆಯೇ ಇರಲಿಲ್ಲ. ಅವಳನ್ನು ಯಾರಾದರೂ ಡಾಕ್ಟರಿಗೆ ತೋರಿಸಬೇಕೆಂದೂ ಆತನಿಗೆ ಹೊಳೆಯಲಿಲ್ಲ. ಮೇಲಿನಿಂದ ಕಾಣುವಂತಹ ಕಾಯಿಲೆ ಏನು ಆಕೆಗಿರಲಿಲ್ಲ. ಅವಳು ತನ್ನೊಡನೆ ಸರಿಯಾಗಿ ನಡೆದುಕೊಳ್ಳುತ್ತಿಲ್ಲ ಎಂದು ಅವಳನ್ನು ದ್ವೇಷಿಸಲು ಪ್ರಾರಂಭಿಸಿದನೇ ಹೊರತು ಅವಳ ವಿಷಯವಾಗಿ ಬೇರೇನೂ ಯೋಚಿಸಲಿಲ್ಲ. ಬಂದ ಸಂಬಳದಿಂದ ಮನೆಗೆ ಬೇಕಾದ ಸಾಮಾನುಗಳನ್ನು ತಂದು ಹಾಕುತ್ತಿದ್ದನು. ವರ್ಷಕ್ಕೊಮ್ಮೆ ಹಬ್ಬಕ್ಕೆ ತಾಯಿ ಮತ್ತು ಹೆಂಡತಿಗೆ ಸೀರೆಗಳನ್ನು ಇನ್ನಿತರ ಬಟ್ಟೆಗಳನ್ನು ತರುತ್ತಿದ್ದನು. ತನ್ನಕೆಗೆ ಏನು ಕೊರತೆಯಾಗಿದೆಯೆಂದು ಆತನು ಯೋಚಿಸಲೇ ಇಲ್ಲ.

ನಸೀಮ ಕೆಲವೊಮ್ಮೆ ತನ್ನ ಮನಸ್ಸಿನಲ್ಲಿ ಮಗುವನ್ನು ತೆಗೆಸುವುದರ ಕುರಿತು ಚಿಂತಿಸುತ್ತಾ, ತನಗೊಂದು ಪರಂಗಿ ಕಾಯಿ ಸಿಕ್ಕಿದ್ದರೆ ತಿಂದು ನೋಡಬಹುದಾಗಿತ್ತು. ಅದರಿಂದಲಾದರೂ ತನ್ನ ಹೊಟ್ಟೆಯಲ್ಲಿದ್ದ ಪಿಂಡ ಹೊರಬೀಳಬಹುದೇ ಎಂದು. ತನಗೆ ಬೇಡದ ಬಸಿರನ್ನು ಹೀಗೆ ಮೇಲಿಂದ ಮೇಲೆ ಯಾಕೆ ಆ ದೇವರು ಕೊಡುತ್ತಿದ್ದಾನೆಂದು ಚಿಂತಿಸತೊಡಗಿದಳು. ಹೆಣ್ಣು ಎಂದರೆ ಸಂತಾನವನ್ನು ಹಡೆಯುವ ಯಂತ್ರದಂತೆ ತಿಳಿದ ಮನಸ್ಸುಗಳು ಹೇಗೆ ಸಮಾಜದಲ್ಲಿ ಹೆಣ್ಣಿನ ಮನಸ್ಸಿನಲ್ಲಿ ಮಾನಸಿಕವಾಗಿ ಹಿಂಸಾತ್ಮಕವಾಗಿ ನಡೆದುಕೊಳ್ಳುವರು ಎಂಬುದಾಗಿ ತಿಳಿಯಬಹುದಾಗಿದೆ.

ಒಟ್ಟಾರೆ ಮುಸ್ಲಿಂ ಸಮುದಾಯದಲ್ಲಿ ಧಾರ್ಮಿಕ ನಂಬಿಕೆಗಳ ನಿಯಮಗಳು ಹೆಣ್ಣು ಮಕ್ಕಳ ಬದುಕಿನಲ್ಲಿ ಅನಾವರಣಗೊಳ್ಳುತ್ತಾ, ಹೆಣ್ಣನ್ನು ಪುರುಷನು ತನ್ನ ನಿಯಮಗಳ ಚೌಕಟ್ಟಿನಲ್ಲಿ ಬಂಧಿಸಿ ಆಕೆಗೆ ಹೊರಗಿನ ಪ್ರಾಪಂಚಿಕ ವಿಷಯಗಳಿಂದ ಹೊರತಾಗಿಸುವುದು ಕಂಡುಬರುತ್ತದೆ. ವ್ಯಕ್ತಿಗತವಾಗಿ ಆಲೋಚನಾ ಪರವಾದ ಸಂಗತಿಗಳನ್ನು ಸಮಷ್ಟಿಯ ನೆಲೆಯಲ್ಲಿ ಬಿತ್ತರಿಸುವ ಮೂಲಕ ಧರ್ಮದ ನಂಬಿಕೆಯಾದ ಮೂಢನಂಬಿಕೆಯ ಅಡಿಯಲ್ಲಿ ಸಿಲುಕಿ ತನ್ನ ಸ್ವ ಪ್ರಜ್ಞೆಯನ್ನು ಕಳೆದುಕೊಳ್ಳುವುದರ ಜೊತೆಗೆ ತನ್ನ ಕುಟುಂಬದ ವಲಯದವರ ಮೇಲೂ ನಂಬಿಕೆಗಳ ವಿಚಾರ ತುಂಬಿ ಅವರ ಬದುಕನ್ನು ದುರಂತದೆಡೆಗೆ ಚಲಿಸುವುದು ಕಂಡುಬರುತ್ತದೆ. ಸಂಪ್ರದಾಯದ ಹೆಸರಿನಲ್ಲಿ ಹೆಣ್ಣಿನ ಮೇಲೆ ನಡೆಸುವಂತಹ ಶೋಷಣೆಯ ಭಿನ್ನ ಮುಖಗಳನ್ನು ಸಾರಾ ಅವರ ಕಾದಂಬರಿಗಳ ಸನ್ನಿವೇಶಗಳ ಮುಖಾಂತರ ತಿಳಿಯಬಹುದಾಗಿದೆ. ಪರಂಪರಾನುಗತವಾಗಿ ಮುಸ್ಲಿಂ ಸಮುದಾಯದ ಜನರು ಹೇಗೆ ತಮ್ಮ ಹೆಂಗಸರ ಮೇಲೆ ನಿಯಮಗಳನ್ನು ವಿಧಿಸಿ ನಡೆಸುವರು ಎಂಬುದನ್ನು ತಿಳಿಸುವುದರ ಜೊತೆಗೆ ಇಂತಹ ಸಮಾಜದ ಮನಸ್ಸುಗಳು ಬದಲಾವಣೆಯನ್ನು ಪಡೆದು ವೈಚಾರಿಕ ನೆಲೆಯ ಮಟ್ಟದಿಂದ ಜಾಗೃತರಾಗಬೇಕೆಂದು ತಿಳಿಸುತ್ತಾರೆ.

## ಕೊನೆ ಟಿಪ್ಪಣಿಗಳು

1. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಮುನ್ನುಡಿ-01
2. ಅದೇ, ಪುಟ-11
3. ಅದೇ, ಪುಟ-12
4. ಅದೇ, ಪುಟ-20
5. ಅದೇ, ಪುಟ-44
6. ಅದೇ, ಪುಟ-53
7. ಸಾರಾ ಅಬೂಬಕ್ಕರ್: ಸಹನಾ, ಪುಟ-22
8. ಅದೇ, ಪುಟ-35
9. ಅದೇ, ಪುಟ-40
10. ಅದೇ, ಪುಟ-52
11. ಅದೇ, ಪುಟ-63
12. ಅದೇ, ಪುಟ-72
13. ಅದೇ, ಪುಟ-80
14. ಅದೇ, ಪುಟ- 90
15. ಅದೇ, ಪುಟ-111
16. ಅದೇ, ಪುಟ-128
17. ಸಾರಾ ಅಬೂಬಕ್ಕರ್: ವಜ್ರಗಳು, ಪುಟ-02
18. ಅದೇ, ಪುಟ-90
19. ಅದೇ, ಪುಟ-142
20. ಡಾ.ಕೆ.ಷರೀಫಾ: ಮುಸ್ಲಿಂ ಮಹಿಳಾ ಸಂವೇದನೆ, ಪುಟ-135
21. ಅದೇ, ಪುಟ-138
22. ಅದೇ, ಪುಟ-154
23. ಅದೇ, ಪುಟ-163

23 ಡಾ. ರಂಗರಾಜ ವನದುರ್ಗ: ಬಂಡಾಯ ಸಾಹಿತ್ಯ ಸಂವೇದನೆ, ಪುಟ-119

24. ಅದೇ, ಪುಟ-120
25. ಸಾರಾ ಅಬೂಬಕ್ಕರ್: ಚಪ್ಪಲಿಗಳು, ಪುಟ- 25
26. ಅದೇ, ಪುಟ-36
27. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ-69
28. ಅದೇ, ಪುಟ-97
29. ಸಾರಾ ಅಬೂಬಕ್ಕರ್: ಹೊತ್ತು ಕಂತುವ ಮುನ್ನ, ಪುಟ45
30. ಸಾರಾ ಅಬೂಬಕ್ಕರ್: ಚಪ್ಪಲಿಗಳು, ಪುಟ-18
31. ಅದೇ, ಪುಟ-22

32. ಅದೇ, ಪುಟ–35

33. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ–19

34. ಅದೇ, ಪುಟ–99

35. ಕೆ.ಷರೀಫಾ: ಮುಸ್ಲಿಂ ಮಹಿಳಾ ಸಂವೇದನೆ, ಪುಟ144

36. ಸಾರಾ ಅಬೂಬಕ್ಕರ್: ಸಹನಾ, ಪುಟ–139

37. ಅದೇ, ಪುಟ–140

38. ಅದೇ, ಪುಟ–148

39. ಅದೇ, ಪುಟ–189

40. ಅದೇ, ಪುಟ–192

41. ಅದೇ, ಪುಟ–199

## ಅಧ್ಯಾಯ–2

# ಗಂಡಿನ ಯಾಜಮಾನ್ಯದ ನೆಲೆಗಳು

ಪುರುಷ ಪ್ರಧಾನ ಸಮಾಜವು ತನ್ನ ಯಾಜಮಾನ್ಯವನ್ನು ರಾಜಕೀಯ, ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ನೆಲೆಯಿಂದ ಅಧಿಪತ್ಯವನ್ನು ನಡೆಸುವುದು ಕಂಡುಬರುತ್ತದೆ. ಗಂಡಿನ ಹತೋಟಿಯಲ್ಲಿ ಹೆಣ್ಣು ಬಂಧಿತಳಾಗಿ ತನ್ನ ಬದುಕನ್ನು ನಡೆಸುವುದರ ಜೊತೆಗೆ ಅನೇಕ ನಿಂದನೆಗಳಿಗೂ ಸಹ ಗುರಿಯಾಗಬೇಕಾಗುತ್ತದೆ. ಹೆಣ್ಣು ಪ್ರತಿಯೊಂದು ವಿಷಯಕ್ಕೂ ಗಂಡು ಹೇಳಿದ ಹಾಗೆ ನಡೆದುಕೊಳ್ಳಬೇಕೆಂಬ ನಿಯಮಗಳನ್ನು ವಿಧಿಸಿರುತ್ತಾರೆ. ಇದನ್ನು ಮೀರಿದರೆ ಶೋಷಣೆ, ದಬ್ಬಾಳಿಕೆಯನ್ನು ಅನುಭವಿಸಬೇಕಾಗುತ್ತದೆ. ಕೌಟುಂಬಿಕ, ಸಾಮಾಜಿಕ ನೆಲೆಯಲ್ಲಿ ನಡೆಯುವಂತಹ ಗಂಡಿನ ಯಾಜಮಾನ್ಯದ ಸ್ವರೂಪಗಳು ವಿಭಿನ್ನವಾಗಿರುವುದನ್ನು ಗಮನಿಸಬಹುದಾಗಿದೆ. ಅಂದರೆ ಮುಸ್ಲಿಂ ಸಮಾಜದಲ್ಲಿ ಪಿತೃ ಪ್ರಾಧಾನ್ಯತೆ ಒಪ್ಪಿತ ವಿಷಯವಾಗಿದೆ. ಕೌಟುಂಬಿಕ ವ್ಯವಸ್ಥೆಯಲ್ಲಿರುವ ದಮನಕಾರಿ ಪುರುಷ ಪ್ರಾಧಾನ್ಯತೆಯು ಹೇಗೆ ಹೆಣ್ಣನ್ನು ಶೋಷಣೆಯನ್ನು ಮಾಡುವ ಬಗೆಯು ಕಂಡುಬರುವುದು. ಪ್ರಧಾನ ಕುಟುಂಬದ ಸಂರಚನೆಯೊಳಗೆ ಸ್ತ್ರೀಯರ ಅಸ್ತಿತ್ವದ ಪರಿಗಣನೆ, ಸ್ತ್ರೀಯರ ಸ್ಥಿತಿಗತಿಗಳು, ಪುರುಷಾಧಿಕಾರದ ನೆಲೆಗಳಿಗೆ ಸ್ತ್ರೀಯರು ತಮ್ಮನ್ನು ತಾವು ಒಪ್ಪಿಗೆ ಸೂಚಿಸುವ ನೆಲೆಯು ವ್ಯಕ್ತವಾಗುವುದು.

**ಉದಾಹರಣೆಗೆ** : 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯ ನಾದಿರಾ ತನ್ನ ಬದುಕಿನ ತೊಡರುಗಳನ್ನು ಚಿಂತಿಸುತ್ತಾ, ತಂದೆಯ ಬಳಿಕ ಮನೆಗೆ ಗಂಡು ದಿಕ್ಕು ಯಾರಿದ್ದಾರೆ? ತಾನೇನೋ ಬೀಡಿ ಕಟ್ಟಿ ಜೀವಿಸಬಹುದು. ಆದರೆ ಮನೆಗೊಂದು ಗಂಡು ದಿಕ್ಕು ಬೇಕಲ್ಲ? ತಾನು ಪ್ರಾಯದ ಹೆಣ್ಣು. ತಾಯಿಯು ಏನೂ ತಿಳುವಳಿಕೆಯಿಲ್ಲದ ಹಳ್ಳಿಯ ಹೆಂಗಸು. ಮುಂದೆ ದಿನ ನೂಕುವುದು ಹೇಗೆ? ತಂದೆ ಎಷ್ಟು ಕ್ರೂರವಾಗಿ ತಾಯಿಯೊಡನೆ ವರ್ತಿಸುತ್ತಿದ್ದರೂ ಎಂದಾದರೊಮ್ಮೆ ಅವರು ಮನೆಗೆ ಬರುವುದು ಕೊಂಚ ತಡವಾದರೂ ತಾಯಿ ಭಯದಿಂದ ಮುದುಡಿಕೊಳ್ಳುತ್ತಿದ್ದರು. ಎಂತಹವರೇ ಆಗಿರಲಿ ಮನೆಯಲ್ಲಿ ಗಂಡಸರು ಅಂತ ಇಲ್ಲದ ಮೇಲೂ ಅದೂ ಒಂದು ಮನೆಯೇ ಎಂದು ತಾಯಿ ಎಷ್ಟೇ ಬಾರಿ ಅಂದದ್ದನ್ನು ತಾನು ಕೇಳಿದ್ದೇನೆ. ಎಂದು ಯೋಚನಾಪರಳಾಗುವುದು ಕಂಡುಬರುತ್ತದೆ.

**"ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿತೆನ್ನುವ"**[1] ಕುಟುಂಬದ ಮನೋಸ್ಥಿತಿಯು ವ್ಯಕ್ತವಾಗುತ್ತದೆ. ಹೆಣ್ಣನ್ನು ಬಹು ಬೇಗನೆ ಮದುವೆ ಮಾಡಿ ಗಂಡನ ಮನೆಗೆ ಸಾಗಿಹಾಕಿದಾಗ ಆಕೆಯ ಬದುಕಿನ ಚಿತ್ರಣವೇ ಬೇರೆ ತೆರನಾಗಿ ತಿರುವುಗೊಳ್ಳುತ್ತದೆ. ಗಂಡನಾದವನು ಮೇಲಾಳುತನದಿಂದ ಅಹಂ ಪ್ರತಿಷ್ಠೆಯಿಂದ ನಿರ್ಬಂಧಗಳ ಬೇಲಿಯನ್ನು ಅವಳ ಸುತ್ತಲೂ ಕಟ್ಟಿ ಅವಳ ಎಲ್ಲಾ ರೀತಿಯ ಬದುಕಿನ ಚಟುವಟಿಕೆಗಳ ಮೇಲೆಯೂ ಹಿಡಿತ ಸಾಧಿಸುತ್ತಾನೆ. ಎಲ್ಲಾ ಸಮುದಾಯದಲ್ಲಿಯೂ ಕಂಡುಬರುವಂತೆ ಮುಸ್ಲಿಂ ಸಮುದಾಯದಲ್ಲಿಯೂ ಸಹ ಸಂಪ್ರದಾಯ, ನಿರ್ಬಂಧ ಹೆಚ್ಚಾಗಿ ಮಹಿಳೆಯರ ಮೇಲೆ ಹೇರಲ್ ಪಟ್ಟಿದ್ದು ಅವರು ಬದುಕನ್ನು ಮೌನವಾಗಿ ಸಾಗಿಸುತ್ತಿರುವುದು ಕಂಡುಬರುತ್ತದೆ.

ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಲ್ಲಿ ಗಂಡಿನ ಯಾಜಮಾನ್ಯದ ನೆಲೆಯೂ ಸಹ ಧಾರ್ಮಿಕವಾಗಿ, ಸಾಮಾಜಿಕವಾಗಿ, ಕುಟುಂಬ ಮತ್ತು ಸಮುದಾಯದಲ್ಲಿ ವ್ಯಕ್ತಗೊಂಡಿರುವ ಬಗೆಯನ್ನು ಗುರುತಿಸಬಹುದಾಗಿದೆ. ಇಲ್ಲಿಯ ಮಧ್ಯಮ ವರ್ಗದ ಮಹಿಳೆಯರು ಮನೆಯಿಂದ ಹೊರಗೆ ಹೆಜ್ಜೆಯನ್ನು ಇಡಬೇಕಾದರೂ ಸಹಿತ ಗಂಡಿನ ಅಪ್ಪಣೆಯನ್ನು ಪಡೆಯಬೇಕು. ಅದನ್ನು ಮೀರಿ ಅವರು ಹೊರಟರೆ ಅವರ ಪಾವಿತ್ರ್ಯಕ್ಕೆ ಅವಮಾನವಾಗುವ ಮಾತುಗಳಿಗೆ ಗುರಿಯಾಗಿ ನಿಂದನೆಗಳನ್ನು ಅನುಭವಿಸಬೇಕಾಗುತ್ತದೆ. ಕುಟುಂಬ ವಲಯದಲ್ಲಿ ಗಂಡು ಹೇಳಿದ ಹಾಗೆ 'ತನ್ನ ಮಾತೇ ವೇದ ವಾಕ್ಯವೆಂಬಂತೆ' ಬದುಕಿನ ನಿರ್ವಹಣೆ ಆಗುವುದು ತಿಳಿಯುತ್ತದೆ. ಸಾರಾ ಅವರ ಕಾದಂಬರಿಗಳಲ್ಲಿ ಕೆಲವು ಗಂಡಿನ ಪಾತ್ರಗಳು ಮಹಿಳೆಯರನ್ನು ನಿರ್ಬಂಧಿಸದೆ ಪ್ರೀತಿಯಿಂದ ಬದುಕನ್ನು ನಡೆಸುವುದು ಕಂಡುಬಂದರೆ, ಅದೇ ಕಾದಂಬರಿಯ ಇತರ ಗಂಡಸರು ಹೆಣ್ಣು ಮನೆಯ ಮಾಳಿಗೆಯಿಂದ ಒಂದು ಹೆಜ್ಜೆಯನ್ನು ಇಡಬಾರದು. ತಾನು ಹೇಳಿದಾಗೆ ನಡೆದುಕೊಳ್ಳಬೇಕೆಂಬ ಮನೋಸ್ಥಿತಿಯ ಮನಸ್ಸುಗಳು ಈ ಸಮಾಜದಲ್ಲಿ ಇದ್ದು ತಮ್ಮ ಅಧಿಕಾರವನ್ನು ಹೇಗೆ ಸ್ಥಾಪಿಸುವರು ಎಂಬುದಾಗಿ ತಿಳಿಯಬಹುದಾಗಿದೆ.

'ವಜ್ರಗಳು' ಕಾದಂಬರಿಯಲ್ಲಿ ಹುಸೈನನು ರಜಿಯಾಳ ಕೈ ಹಿಡಿದು ಆಕೆಯ ಮುಖ, ಮೂತಿ ನೋಡದೆ ಹೊಡೆಯುತ್ತಿದ್ದನು. ಆತನು ಬಾಗಿಲಿಗೆ ಬೆನ್ನು ಮಾಡಿ ನಿಂತಿದ್ದರಿಂದ ಆತನ ಮುಖ ಕಾಣಲಿಲ್ಲ. ರಜಿಯಾ ಇನ್ನೊಂದು ಕೈಯನ್ನು ಬಾಯಿ ಗಡ್ಡವಾಗಿಟ್ಟು ಅಳುವನ್ನು ತಡೆಯುತ್ತಿದ್ದಳು. "ಯಾಕೆ ಮಾಳಿಗೆಗೆ ಬೇಗ ಚಹ ಕಳುಹಿಸಲಿಲ್ಲ? ಬೊಗಳು!"[2] ಎನ್ನುತ್ತಾ ಆತ ಮತ್ತೆ ಮತ್ತೆ ಹುಡುಗಿಯನ್ನು ಚಚ್ಚುತ್ತಿದ್ದನು. ಸೆಲ್ಮಾ ಎಲ್ಲೂ ಕಣ್ಣಿಗೆ ಬೀಳಲಿಲ್ಲ. ಅಡಿಗೆಯ ಹೆಂಗಸು ಕಜ್ಜಮ್ಮ ಮತ್ತು ಕೆಲಸದ ಹುಡುಗಿ ಐಸು ಮೂಲೆಯಲ್ಲಿ ನಿಂತು ನಡಗುತ್ತಿದ್ದರು. ತೀರ ಅನಿರೀಕ್ಷಿತವಾದ ಈ ದೃಶ್ಯವನ್ನು ಕಂಡ ನಫೀಸಾ ಕಲ್ಲಾಗಿ ನಿಂತಳು. ಆ ಗಂಡಸು ಕೈ ಸೋತು ಹೊಡೆಯುವುದನ್ನು ನಿಲ್ಲಿಸಿ ಅಲ್ಲಿಂದ ಹೊರಬಂದು ನಫೀಸಳನ್ನು ದಾಟಿ ಹೋಗುವಾಗ ಆಕೆಯೆಡೆಗೆ ಎಸೆದ ಕ್ರೂರ ನೋಟವನ್ನು ಕಂಡು ಆಕೆ ಇನ್ನೊಮ್ಮೆ ಕಂಪಿಸಿದಳು. ಬಳಿಕ ಮೂಲೆಯಲ್ಲಿ ಅಳುತ್ತಾ ನಿಂತಿದ್ದ ರಜಿಯಾಳೆಡೆಗೆ ಧಾವಿಸಿದಳು. "ಯಾರಮ್ಮಾ ಅವನು' ನಿನ್ನನ್ನು ಯಾಕೆ ಹೊಡೆದ?" ಮೃದುವಾಗಿ ಕೇಳಿದಳು ನಫೀಸಾ. ಹುಡುಗಿ ಬೆದರುಗಣ್ಣುಗಳಿಂದ ಬಾಗಿಲೆಡೆಗೆ ನೋಡುತ್ತಾ ಮೆಲ್ಲಗೆ, "ಅವನು ನನ್ನ ದೊಡ್ಡಣ್ಣ. ಆತನಿಗೆ ಮತ್ತು ಅತ್ತಿಗೆಗೆ ಮಾಳಿಗೆಗೆ ಚಹ ಕಳುಹಿಸಲು ತಡವಾಯಿತೆಂದು ನನ್ನನ್ನು ಹೊಡೆದ."[3] ಎಂದು ಬಹು ಮೆಲ್ಲಗೆ ನುಡಿಯುತ್ತಿದ್ದಂತೆ ದುಃಖ ಒತ್ತರಿಸಿ ಬಂದು ಬಿಕ್ಕಿ ಬಿಕ್ಕಿ ಅತ್ತತಂಹ ಬಗೆಯಲ್ಲಿ ಗಂಡು ತನ್ನ ಯಾಜಮಾನ್ಯದ ನೆಲೆಯನ್ನು ಕುಟುಂಬ ವಲಯದಲ್ಲಿ ಹೇಗೆ ಪ್ರತಿಯೊಂದು ವಿಷಯದಲ್ಲೂ ನಿಯಮಗಳನ್ನು ಸ್ಥಾಪಿಸಲ್ಪಟ್ಟಿರುವನು ಎಂಬುದಾಗಿ ಕಂಡುಬರುತ್ತದೆ.

ಹೆಣ್ಣು ತನ್ನ ಮನಸ್ಸಿನಲ್ಲಿರುವ ಆಸೆ, ಆಕಾಂಕ್ಷೆಗಳನ್ನು. ಭಾವನೆಗಳನ್ನು ಗಂಡಿನ ಬಳಿ ವ್ಯಕ್ತಪಡಿಸದೆ ನಾಲ್ಕು ಗೋಡೆಗಳ ಮಧ್ಯೆ ಕತ್ತಲಿನ ಅಂಧಕಾರದಲ್ಲಿ ಬಾಳು ನಡೆಸುವುದು ಕಂಡುಬರುತ್ತದೆ. ಗಂಡು-ಹೆಣ್ಣಿನ ಸಂಬಂಧವೆಂಬುದು ಕುಟುಂಬ ನಿರ್ವಹಣೆ, ತಾಯ್ತಾನ, ವೈವಾಹಿಕ ಜೀವನಕ್ಕೆ ಸೀಮಿತವಾದಂತಹ ವಲಯಕ್ಕೆ ಒಳಪಟ್ಟಿರುವುದಲ್ಲದೇ, ಹೆಣ್ಣಿನ ಮನದಿಂಗಿತವನ್ನು ತಿಳಿಯದ ಗಂಡು ಹೆಣ್ಣನ್ನು ತನಗೆ ಬೇಕಾದ ಹಾಗೆ ಬಳಸಿಕೊಳ್ಳುವುದು ಸಹ ಸಾರಾ ಅವರ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಪ್ರೀತಿ, ವಿಶ್ವಾಸದಿಂದ ಹೆಣ್ಣಿನ ಮನಸ್ಸನ್ನು ಒಲಿಸಿಕೊಳ್ಳದೇ ದರ್ಪ, ಅಹಂ ಪ್ರತಿಷ್ಠೆಯಿಂದ ಗಂಡು ಒರಟಾಗಿ ಮಾತನಾಡಿ ಹೆಣ್ಣಿನ ಮನಸ್ಸನ್ನು ದುರ್ಬಲಗೊಳಿಸುವ ಸಂಗತಿಯು ಕಂಡುಬರುವುದು.

## 1. ಲಿಂಗ ತಾರತಮ್ಯ:

ಪಿತೃ ಪ್ರಧಾನತೆಯ ಒಳಗೆ ಸ್ತ್ರೀಯರಿಗೆ ಸ್ವಾತಂತ್ರ್ಯ, ಸಮಾನತೆ, ಸಹೋದರತ್ವದ ಕಾಳಜಿಯು ದೂರವೇ ಉಳಿದಿರುವಂತಹುದು. ಹೆಣ್ಣನ್ನು ವರ್ಗ, ವರ್ಣ, ಜಾತಿ, ಆಧಾರಿತದಿಂದ ಬೇರೆ ಮಾಡುವಂತಹ ಅಸಮಾನತೆಯ ನೆಲೆಗಳು ಇರುವಂತೆ ಲಿಂಗ ತಾರತಮ್ಯ ನೆಲೆಯು ಸಮಾಜದಲ್ಲಿ ಇರುವುದು ಕಂಡುಬರುತ್ತದೆ. ಈ ಲಿಂಗ ತಾರತಮ್ಯವು ಸಮಾಜದಲ್ಲಿ ಶ್ರೇಷ್ಠ–ಕನಿಷ್ಠ ಮಟ್ಟದಲ್ಲಿರುವುದು. ಗಂಡಸರು ಆಳುವ ಮತ್ತು ಹೆಂಗಸರು ಆಳಿಸಿಕೊಳ್ಳುವ ನೆಲೆಯಿಂದ ಪರಿಗಣಿಸಲ್ಪಟ್ಟಿದ್ದಾರೆ. ಮುಸ್ಲಿಂ ಸಮಾಜದಲ್ಲಿಯೂ ಸಹ ಲಿಂಗ ತಾರತಮ್ಯದ ನೆಲೆಗಳಿವೆ. ಗಂಡು ಅಥವಾ ಹೆಣ್ಣು ಮಗುವನ್ನು ಪಡೆಯುವುದು ಹೆಣ್ಣಿನ ಆಯ್ಕೆಯಲ್ಲ. ಅದು ಪ್ರಕೃತಿ ನಿಯಮ. ನಿಸರ್ಗದಲ್ಲಿ ಹೆಣ್ಣು ಅಥವಾ ಗಂಡಿನಲ್ಲಿ ಶ್ರೇಷ್ಠ, ಕನಿಷ್ಠ ಎಂಬ ಭೇದಗಳಿಲ್ಲ. ಬದಲಾಗಿ ಇಬ್ಬರ ಪಾತ್ರದಲ್ಲೂ ನಿರ್ದಿಷ್ಟ ಜವಾಬ್ದಾರಿಗಳಿರುತ್ತವೆ. ಪುರುಷ ಪ್ರಧಾನ ಸಮಾಜ ವ್ಯವಸ್ಥೆಯಲ್ಲಿ ಹೆಣ್ಣನ್ನು ಪುರುಷನ ಅನುಕೂಲಕ್ಕಾಗಿ ಬಳಸಿಕೊಳ್ಳುತ್ತಾರೆ. ಅವಳ ಮೇಲೆ ಸ್ತ್ರೀಧರ್ಮ, ಪಾತಿವ್ರತ್ಯದ ಗುಣಗಳನ್ನು ಆರೋಪಿಸಲಾಗುತ್ತದೆ. ಊಟ, ಆರೈಕೆ, ವೈದ್ಯಕೀಯ ಮತ್ತು ಶೈಕ್ಷಣಿಕ ಇತರೇ ಸವಲತ್ತುಗಳಿಂದ ಹೆಣ್ಣೆಂಬ ತಾರತಮ್ಯದಿಂದ ಬೇರ್ಪಡಿಸುವರು. 'ಗಂಡು ಮಗ ನಮ್ಮನ್ನು ಮುಂದೆ ಸಾಕ್ತಾನೆ'[4] ಎಂಬುದು ಹಿರಿಯರ ಆಸೆ. ಅದಕ್ಕಾಗಿಯೇ ಗಂಡು ಮಗುವಿಗೆ ಹೆಚ್ಚು ಪ್ರಮಾಣದಲ್ಲಿ ಊಟ ಕೊಟ್ಟರೆ, ಹೆಣ್ಣು ಮಕ್ಕಳಿಗೆ ಸತ್ವವಿಲ್ಲದ ಕಡಿಮೆ ಪ್ರಮಾಣದ ಊಟವನ್ನು ಕೊಡ್ತಾರೆ.

ಲಿಂಗತಾರತಮ್ಯವನ್ನು ಬಾಲ್ಯದಿಂದಲೂ ಸಹ ಈ ಸಮಾಜವು ರೂಪಿಸುವುದು ಕಂಡುಬರುತ್ತದೆ. ಈ ಅಸಮಾನತೆಗೆ ಸಿಲುಕಿ ವೈಜ್ಞಾನಿಕ ಸೊನೊಗ್ರಾಫಿಯ ಮೂಲಕ ಲಿಂಗಪತ್ತೆ ಮಾಡಿ, ಗರ್ಭದಲ್ಲಿರುವ ಮಗು, ಹೆಣ್ಣೊ, ಗಂಡೊ ಎಂದು ಪತ್ತೆ ಮಾಡಬಹುದಾಗಿದೆ. ಹೆಣ್ಣು ಎಂದು ಗೊತ್ತದರೆ ಸಾಕು ಗರ್ಭಸ್ಥ ಮಗುವನ್ನು ಹೆಣ್ಣಾಗಿರುವ ಕಾರಣಕ್ಕಾಗಿ ಕೊಲೆ ಮಾಡಲಾಗುತ್ತದೆ. ಇಡೀ ಕುಟುಂಬದ ಚೌಕಟ್ಟಿನಲ್ಲಿ ನಿರ್ಣಯ ತೆಗೆದುಕೊಳ್ಳುವಂತಹ ಹಕ್ಕಿನಿಂದ ಮಹಿಳೆಯು ಹಿಂದುಳಿದಿರುವುದು ಕಂಡುಬರುತ್ತದೆ.

ಪೈಗಂಬರರು ಅತ್ಯಂತ ಪ್ರೀತಿಸುವ ಹೆಣ್ಣು ಮಗುವಿನ ಬಗ್ಗೆ ಹೀಗೆ ನಡೆದರೆ ಒಂದು ದಿನ ಭಾರತದಲ್ಲಿ ಹೆಣ್ಣು ಮಕ್ಕಳೇ ಇರುವುದಿಲ್ಲ. ಪಂಜಾಬ್, ಹರಿಯಾಣಗಳಲ್ಲಿ ಒಂದು ಸಾವಿರ ಪುರುಷರಿಗೆ ಕೇವಲ ಎಂಟು ನೂರಾ ಇಪ್ಪತ್ತೇಳು ಜನ ಮಹಿಳೆಯರಿದ್ದಾರೆ.[5] ಈ ರೀತಿಯ ಗಂಡು–ಹೆಣ್ಣೆಂಬ ಭಿನ್ನತೆಯಲ್ಲಿ ಏರುಪೇರಿರುವುದನ್ನು ಗಮನಿಸಬಹುದಾಗಿದೆ. ಮುಸ್ಲಿಂ ಸಮುದಾಯದ ಮಹಿಳೆಯರು ಲಿಂಗತಾರತಮ್ಯದ ನೆಲೆಯಲ್ಲಿ ದಮನಿತಳಾಗುವ ಬಗೆಯನ್ನು ಅರಿಯಲು ಸಾರಾ ಅವರ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಮಹಮ್ಮದ್ ಖಾನ್ ತಮ್ಮ ಹೆಂಡತಿ ಫಾತಿಮ್ಮಳಿಗೆ ಒಳ್ಳೆಯ ಸೀರೆ ಇಲ್ಲದಿದ್ದರೂ ಪರವಾಗಿಲ್ಲ; ತಮಗೆ ಕೋಟಂತೂ ಬೇಕೇ ಬೇಕು ಎಂಬ ತೀರ್ಮಾನಕ್ಕೆ ಎಂದೊ ಬಂದಿದ್ದರು. "ಮನೆಯೊಳಗೆ ಕುಳಿತುಕೊಳ್ಳುವ ಹೆಂಗಸರಿಗೆ ಬೆಲೆ ಬಾಳುವ ಬಟ್ಟೆ ಬರೆಗಳೇಕೆ? ಸುಮ್ಮನೆ ದುಡ್ಡು ದಂಡ. ನಾಲ್ಕು ಕಡೆ ತಿರುಗುವ ಗಂಡಸರಿಗಾದರೆ ಒಳ್ಳೆ ಬಟ್ಟೆ ಬೇಕು"[6] ಎಂಬುದು ಇವರ ವಾದ. ಉಡುವ ಬಟ್ಟೆಯಲ್ಲಿಯೂ ಸಹ ಲಿಂಗ ತಾರತಮ್ಯವನ್ನು ಮಾಡುವ ಮನಸ್ಸುಗಳು ಈ ಸಮಾಜದಲ್ಲಿರುವುದನ್ನು

ಕಾಣಬಹುದಾಗಿದೆ. ಮಹಮ್ಮದ್ ಖಾನ್ ತನ್ನ ಮಗಳ ಮನೆಗೆ ಬಂದು "ನಿನ್ನ ಉಮ್ಮಾ ಬಹಳ ನೆನಪು ಮಾಡಿಕೊಳ್ಳುತ್ತಿದ್ದಾಳಮ್ಮ. ಈಗ ನನ್ನೊಡನೆ ಹೊರಡು. ಮದುವೆ ವಿಷಯ ಆಮೇಲೆ ಯೋಚಿಸೋಣ" ಎಂದರು. ನಾದಿರಾಗೆ ಅಚ್ಚರಿಯಾಯಿತು. ತನ್ನ ತಂದೆ ತನ್ನ ತಾಯಿಯ ಮಾತಿಗೆ ಇಷ್ಟು ಬೆಲೆ ಕೊಡಲು ಪ್ರಾರಂಭಿಸಿದ್ದು ಯಾವಾಗ? ತಂದೆ ಈ ರೀತಿ ಬದಲಾದುದಾದರೂ ಹೇಗೆ?[7] ಎಂದು ಯೋಚಿಸಿದಳು. ಕುಟುಂಬ ವಲಯದಲ್ಲಿ ತನ್ನ ಮಾತೇ ನಡೆಯಬೇಕೆಂಬ ಮನಸ್ಥಿತಿಯು ಇದ್ದ ತಂದೆಯು ಹೇಗೆ ಈ ರೀತಿಯಲ್ಲಿ ಬದಲಾದರು ಎಂದು ಚಿಂತಿಸಿದ ಬಗೆಯು ಕಂಡುಬರುತ್ತದೆ.

'ಸಹನಾ' ಕಾದಂಬರಿಯ ನಸೀಮಾ ಮದುವೆ ಆಗಿ ಪಾಷನ ಮನೆಗೆ ಹೋದ ಕೆಲವು ತಿಂಗಳಾದ ನಂತರ ಅತ್ತೆ ಕತೀಜಮ್ಮ ಮೊಮ್ಮಗ (ಮಗಳ ಮಗ) ನೂರುದ್ದೀನ್‌ಗೆ ಬಂಗುಡೆ ಮೀನಿನ ತುಂಡುಗಳು ಮತ್ತು ಸಾರು ಹಾಕುತ್ತಾಳೆ. ನಸೀಮಳಿಗೆ ಮಾತ್ರ ಬರೀ ಸಾರು ಬಡಿಸುತ್ತಾಳೆ. ಅತ್ತೆಯ ಮನಸ್ಸಿನಲ್ಲಿ ಗಂಡು ಮಕ್ಕಳು ಮೊದಲು ಮಾಂಸದ ತುಂಡನ್ನು ತಿನ್ನಬೇಕು. ನಂತರ ಉಳಿದರೆ ಹೆಂಗಸರು ತಿನ್ನಬೇಕೆಂಬ ತಾರತಮ್ಯವನ್ನು ಆಹಾರದಲ್ಲಿಯೂ ಮಾಡುವುದು ಕಂಡುಬರುತ್ತದೆ. ಹೆಣ್ಣು ಮಗುವಿನ ಬಗೆಗೆ ತಾರತಮ್ಯವನ್ನು ಮಾಡುವಂತಹ ಮನಸ್ಸುಗಳು ಈ ಸಮಾಜದಲ್ಲಿ ಬೇರುಬಿಟ್ಟಿರುವುದನ್ನು ಗುರುತಿಸಬಹುದಾಗಿದೆ. ಗಂಡು ಮಕ್ಕಳಿಗಿಂತ, ಹೆಣ್ಣು ಮಕ್ಕಳಿಗೆ ಹೆಚ್ಚಿನ ಕೆಲಸದ ಹೊರೆಯನ್ನು ಹೊರಿಸಲಾಗಿದೆ. ನಸೀಮ ಮತ್ತು ಅವಳ ನಾದಿನಿಯ ಮಗ ನೂರುದ್ದೀನ್ ಹಾಯಾಗಿ ಆಡಿಕೊಂಡಿದ್ದಾನೆ. ಆದರೆ ನಸೀಮ ಬಾವಿಯಿಂದ ನೀರು ತಂದು ತಿಂಡಿ, ಚಹಾ, ಅಡಿಗೆ, ರೊಟ್ಟಿ ಮಾಡಿದ ನಂತರ ಬೀಡಿಕಟ್ಟಬೇಕಾಗುತ್ತದೆ. ಹುಡುಗನಾದ ಕಾರಣಕ್ಕೇನೇ ಅವನಿಗೆ ಕುಟುಂಬದಲ್ಲಿ ಯಾವ ಜವಾಬ್ದಾರಿಗಳನ್ನು ವಹಿಸಿರುವುದಿಲ್ಲ.

ಕುಟುಂಬದಲ್ಲಿ ಗಂಡು ಮಗುವಿನ ಜನನಕ್ಕೆ ಪ್ರಾಶಸ್ತ್ಯವನ್ನು ನೀಡುವಂತೆ ಹೆಣ್ಣು ಮಗುವಿನ ಜನನಕ್ಕೆ ಇರುವುದಿಲ್ಲ. 'ಸಹನಾ' ಕಾದಂಬರಿಯ ನಸೀಮಳಿಗೆ ಹೆಣ್ಣು ಮಗು ಹುಟ್ಟಿದಾಗ ಗಂಡ ಹೇಳುತ್ತಾನೆ. 'ಮಗು ಗಂಡಾಗಬಹುದೆಂದು ಯೋಚಿಸಿದ್ದೆ ಮೊದಲಿಗೆ ಹೆಣ್ಣು ಹೆತ್ತೆಯಾ?'[8] (ಪುಟ–75). ಅತ್ತೆ ಹೇಳುತ್ತಾಳೆ 'ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ' ಎಂದು ಅಸಂತೋಷ ವ್ಯಕ್ತಪಡಿಸುತ್ತಾಳೆ. ಯಾರು ಏನೇ ನಿಂದಿಸಿದರೂ, ತಾಯಿ ನಸೀಮಳಿಗೆ ಮಗುವಿನ ಬಗ್ಗೆ ಪ್ರೀತಿ ಇತ್ತು ಹೀಗಾಗಿ ಆಕೆಗೆ ಕೇಳಿದ ಯಾಕಾದರೂ ಈ ಹೆಣ್ಣು ಮಗು ಹುಟ್ಟಿತು ಎಂದು ಅನಿಸಲೇ ಇಲ್ಲ'[9] ಎಂದುಕೊಳ್ಳುತ್ತಾಳೆ. ಹೆಣ್ಣು ಮಗುವಿಗೆ ಹಾಲು ಬಿಸ್ಕತ್ ಎಲ್ಲ ಯಾಕೆ? ಹೆಣ್ಣು ಮಗುವಿಗೆ ಜಾಸ್ತಿ ಕೊಂಡಾಟ ಕಲಿಸಬಾರದೆಂದು ಅತ್ತೆಯ ಮನೋ ನಿರ್ಧಾರ. ಈಗಿನಿಂದಲೇ ಅವಳನ್ನು ಶಿಸ್ತಿನಿಂದ ಬೆಳೆಸಬೇಕು ಎಂಬುದು ಅಜ್ಜಿಯ ತೀರ್ಮಾನ. ಹೆಣ್ಣು ಮಗು ಬೇಬಿಗೆ ಸರಿಯಾದ ಊಟ, ಆರೈಕೆ, ಔಷಧಿ ದೊರಕದೇ ಕೊನೆಯುಸಿರೆಳೆಯಿತು. ಎರಡನೆಯ ಸಲವೂ ನಸೀಮಳಿಗೆ ಹೆಣ್ಣು ಮಗು ಹುಟ್ಟಿದಾಗ ನೊಂದುಕೊಂಡು "ಯಾಕಮ್ಮ ನೀನು ಹೆಣ್ಣಾಗಿ ಹುಟ್ಟಿದೆ? ಗಂಡಾಗಿದ್ದರೆ ಸರಿಯಾದ ಆಹಾರ, ಔಷಧಿಯಾದರೂ ದೊರೆತು ಬದುಕುತ್ತಿದ್ದೆ. ಹೆಣ್ಣಾಗಿದ್ದರಿಂದ ಒಂದು ತೊಟ್ಟು ಹಾಲು ನಿನಗೆ ಸಿಗಲಾರದು"[10] ಎಂದು ಹೇಳುತ್ತಾಳೆ. "ಈ ಬಾರಿಯೂ ಹೆಣ್ಣೆನ್ನೆ ಹಡೆದೆಯಾ? ನಿನ್ನ ಹೊಟ್ಟೆಯಲ್ಲಿ ಗಂಡು ಮಗು ಹುಟ್ಟುವುದು ಕನಸಿನ ಮಾತು" ಎಂಬ ಗಂಡನ ತಿರಸ್ಕಾರ. ಈ ಸಲವೂ ಹೆಣ್ಣು ಹುಟ್ಟಿದ್ದಕ್ಕೆ ಅತ್ತೆ ನೋಡಲೂ ಬರಲಿಲ್ಲ. 'ನಿಮಗೆ ಬೇಡವಾದರೆ ಇದನ್ನು ಈಗಲೇ ಕೊಂದುಬಿಡಿ'[11] ಎಂದು ನಸೀಮ ಗಂಡನ ಅಸಡ್ಡೆಗೆ ದುಃಖಿಸುತ್ತಾಳೆ. 'ಈ ಸಲವಾದರೂ ನಿನ್ನ ಹೊಟ್ಟೆಯಲ್ಲಿ ಗಂಡು ಮಗು ಹುಟ್ಟಬಹುದೆಂದು ಕೊಂಡಿದ್ದೆ. ಆ ಅದೃಷ್ಟ ನಿನ್ನ ಹಣೆಯಲ್ಲಿ ಬರೆದಿದ್ದರೆ ತಾನೆ? ಎಂದು ಮುಖ ಗಂಟಿಕ್ಕುವ ಅತ್ತೆ. ಅದಕ್ಕೆ ಜೀಗಿತ್ತಿ ಸಕೀನ ಹೇಳುತ್ತಾಳೆ. 'ಹೆಣ್ಣು ಮಗು

ಯಾಕೆ ಹುಟ್ಟಿಸಿದೆ? ಎಂದು ಅಲ್ಲಾಹುನ ಬಳಿ ಕೇಳುವಂತಿಲ್ಲವಲ್ಲ? ಈ ಬಾರಿ ಅವಳು ಬದುಕಿದ್ದೇ ದೊಡ್ಡದು'[12] ಎನ್ನುತ್ತಾಳೆ. ಮೂರನೇ ಸಲ ಗಂಡು ಮಗು ಹುಟ್ಟಿದಾಗ ಅತ್ತೆ ಕತೀಜಮ್ಮ ಮೊಮ್ಮಗನಿಗಾಗಿ ಹಾಲು ತಂದು ಬಾಟಲಿಗೆ ಹಾಕಿ ತಾನೇ ಕುಡಿಸುತ್ತಿದ್ದಳು. ಇಕ್ಬಾಲ್‌ನನ್ನು ಪ್ರೀತಿಯಿಂದ ಸಾಕುತ್ತಿದ್ದಳು.

ಮಗು ಹುಟ್ಟ ಬೇಕಾದರೆ ಹೆಣ್ಣಾದವಳು ಎಷ್ಟು ಕಷ್ಟ ಪಡಬೇಕು? ತಾನನುಭವಿಸಿದ ವೇದನೆಯನ್ನು ಇವರು ನೋಡಿದ್ದರೆ ಆಗಲೂ ಇವರು ಇಂತಹ ಮಾತನ್ನುತ್ತಿದ್ದರೆ? ಎಂದು ನಸೀಮ ಚಿಂತಿಸುತ್ತಾ, ಗಂಡಸರು ಎಷ್ಟೊಂದು ಸ್ವಾರ್ಥಿಗಳು![13] ಇವರ ಹೃದಯವೆಂಬ ಮೈದಾನ ಮರಳು ಗಾಡಿನಿಂದ ತುಂಬಿದೆಯೇ ಹೊರತು ಅಲ್ಲಿ ಸ್ನೇಹ, ಕರುಣೆಯೆಂಬುದು ಹರಿಯಲು ಸಾಧ್ಯವೇ ಇಲ್ಲವೇನೋ ಎಂಬ ತೀರ್ಮಾನಕ್ಕೆ ಬಂದಳು. ಗಂಡನ ದೃಷ್ಟಿಯಲ್ಲಿ ಹೆಣ್ಣು ಮಕ್ಕಳೆಂದರೆ ಮಕ್ಕಳೇ ಅಲ್ಲ. ಅವು ಎಂದಿದ್ದರೂ ಪರರ ಸೊತ್ತು ಗಂಡು ಮಗುವಾದರೆ ಮಾತ್ರ ಮಗ ಹುಟ್ಟಿದನೆಂದು ಹೆಮ್ಮೆ ಪಡಬಹುದೆಂಬುದು ಇವರೆಲ್ಲರ ಅಭಿಪ್ರಾಯ. ಆದ್ದರಿಂದ ತನಗೊಂದು ಗಂಡು ಮಗು ಹುಟ್ಟಲೇಬೇಕು ಎಂಬ ತೀರ್ಮಾನಕ್ಕೆ ಬಂದಂತಹ ಬಗೆಯು ಕಾಣಬಹುದಾಗಿದೆ. ಪಾಷಾನು ತನ್ನ ಹೆಣ್ಣು ಮಗುವಿನ ಮೇಲೆ ತಾತ್ಸಾರ ಭಾವನೆಯನ್ನು ಪಡೆದನು. ಆದರೆ ಆ ಎಳೆಯ ಮಗು ತಂದೆಯ ಪ್ರೀತಿಯನ್ನು ತನ್ನ ಕಡೆಗೆ ಒಲಿಸಿಕೊಳ್ಳುವ ಪರಿಯು ಕಂಡುಬರುವುದು. ಐದು ತಿಂಗಳ ಮುದ್ದು ಮಗು! 'ಹೆಣ್ಣು ಮಗು' ಎಂದು ತನ್ನನ್ನು ತಿರಸ್ಕರಿಸಿದ ತಂದೆಯನ್ನು ತನ್ನ ನಿಷ್ಕಳಂಕವಾದ ಆಟ, ನಗೆಗಳಿಂದ ತನ್ನೆಡೆಗೆ ಸೆಳೆಯತೊಡಗಿದ್ದಳು. ಯಾರಿಗೂ ತಿಳಿಯದಂತೆ ತಂದೆಯ ಹೃದಯವನ್ನು ಹೊಕ್ಕು ಅಲ್ಲಿ ತನಗಾಗಿ ಒಂದು ಜಾಗವನ್ನು ಕಾದಿರಿಸಿಕೊಂಡಿದ್ದಳು ಆ ಪೋರಿ! ನಗುವಾಗ ಗುಳಿಬೀಳುವ ಕೆನ್ನೆ. ತಾಯಿಯ ಬಣ್ಣ ತನ್ನ ಗುಂಗುರು ಕೂದಲು ತಾಯಿಯ ಹಾಲನ್ನು ಮಾತ್ರ ಕುಡಿಯುತ್ತಿದ್ದರೂ ಮೈಕೈ ತುಂಬಿಕೊಂಡು ನೋಡುವವರ ದೃಷ್ಟಿ ತಾಕುವಂತೆ ಇದ್ದಳು. ಅವನಿಗರಿವಿಲ್ಲದೆ ಅವನ ಕೈಗಳು ಅವಳನ್ನೆತ್ತಿಕೊಳ್ಳುವುದು. ತಂದೆ ಮಗಳ ಮಧ್ಯೆ ಮಮತೆಯ ಮಹಾಪೂರ ಹರಿಯುವುದು. ಹೆಣ್ಣು ಮಗುವೆಂದು ಭೇದವನ್ನು ಮಾಡಿದರೂ ಸಹ ವಾತ್ಸಲ್ಯದ ಸೆಳೆತವು ತನ್ನ ಮಗುವನ್ನು ಒಪ್ಪಿಕೊಳ್ಳುವಂತಹ ಮನಸ್ಥಿತಿಯು ವ್ಯಕ್ತವಾಗುವುದು.

ನಸೀಮಳಿಗೆ ಪುಟ್ಟ ಮಗು ಇಕ್ಬಾಲನು ಅಂಬೆಗಾಲಿಕ್ಕುತ್ತಾ ತಾಯಿಯ ಬಳಿ ಬಂದು ಮಂಚದ ತುದಿಯನ್ನು ಹಿಡಿದು ನಿಂತು ತಾಯಿಯೊಡನೆ 'ತನ್ನನ್ನು ಎತ್ತಿಕೊ' ಎನ್ನುವಂತೆ ಕೈ ಎತ್ತಿ ಅಳುತ್ತಿದ್ದನು. ಮೊಮ್ಮಗನ ಅಳುವನ್ನು ಕೇಳಿ ಕತೀಜಮ್ಮ ಒಳಗಿಂದ ಓಡಿಬಂದು. "ಏನಾಯಿತು ನನ್ನ ಬಂಗಾರಕ್ಕೆ!"[14] ಎನ್ನುತ್ತಾ ಮಗುವನ್ನೆತ್ತಿಕೊಂಡು ಅಡಿಗೆಮನೆಗೆ ಹೋಗಿ ಅವನಿಗೆಂದು ತಂದಿಟ್ಟಿದ್ದ ಬಾಳೆಹಣ್ಣನ್ನು ಸುಲಿದು ಅವನ ಕೈಯಲ್ಲಿ ಕೊಟ್ಟಳು. ಆಗ ಅಲ್ಲೇ ಇದ್ದ ರೋಸಿ, "ಅಜ್ಜೀ, ಲೋಚಿಗೆ ಅಣ್ಣು?" ಎಂದು ಅಜ್ಜಿಯ ಬಳಿಗೋಡಿ ಅಜ್ಜಿಯ ಕಾಲನಪ್ಪಿಕೊಂಡು ಕೈ ಚಾಚಿದಳು. "ಅದು ಅವನಿಗೆ ಪಾಪ, ತಾಯಿಯ ಹಾಲೂ ಸಿಕ್ಕದ ಹುಡುಗ! ನಿನಗೇಕೆ? ನೀನು ಬೇಕಾದರೆ ಅನ್ನ ತಿನ್ನು ಎನ್ನುತ್ತಾ ಆ ಎರಡು ವರ್ಷದ ಮಗುವನ್ನು ಗದರಿಸಿ ದೂರ ಸರಿಸಿದಳು".[15] ಆಕೆಯ ಸೊಂಟದಲ್ಲಿದ್ದ ಮಗು ಬಾಳೆಹಣ್ಣು ತಿನ್ನುತ್ತಾ ಅಕ್ಕನ ಮುಖ ನೋಡಿ ಕಿಲಕಿಲನೆ ನಕ್ಕನು. ಆಗ ಒಮ್ಮೆಲೇ ರೋಸಿಗೆ ಅಳು ಬಂದು ಬಿಟ್ಟಿತು. ಅವಳು ಅಳುತ್ತಾ ತಾಯಿಯ ಬಳಿ ಹೋಗಿ ತಾಯಿಯ ಎದೆಯಲ್ಲಿ ಮುಖವಿಟ್ಟು ಅಳುತ್ತಾ, "ಉಮ್ಮಾ ಮಗು ಅಣ್ಣು ತಿಂತು. ಅಜ್ಜಿ ಲೋಚಿಗೆ ಕೊಡಲ್ಲ!"[16] ಎಂದು ಬಿಕ್ಕುತ್ತಾ ಹೇಳಿದಾಗ ನಸೀಮಳ ಕರುಳು ಚುರುಕ್ ಎಂದಿತು. ಒಂದು ತುಂಡು ಇವಳಿಗೂ ಕೊಟ್ಟಿದ್ದರೇನಾಗಿತ್ತು ಎಂದು ಯೋಚಿಸಿದಳು. ರೋಸಿ ಕೂಡಾ ಗಂಡಾಗಿದ್ದರೆ ಅವಳಿಗೆ ಹಣ್ಣು

ಸಿಗುತ್ತಿತ್ತೇನೋ. ಪ್ರಪಂಚದಲ್ಲಿ ಹುಟ್ಟುವ ಮಕ್ಕಳೆಲ್ಲ ಗಂಡಾಗಿಯೇ ಹುಟ್ಟಿದ್ದರೆ ಎಷ್ಟು ಚೆನ್ನಾಗಿತ್ತು! ಆದರೆ ಎರಡು ವರ್ಷದ ಆ ಪುಟ್ಟ ಮಗುವಿಗೆ ಅದೆಲ್ಲ ಅರ್ಥವಾಗುತ್ತದೆಯೇ?[17] ಎಂದು ತನ್ನ ಎದುರಿಗೆ ಭೇದ ತೋರಿಸುವಂತಹ ಇಂತಹ ವ್ಯಕ್ತಿಗಳ ಮೇಲೆ ಆಕ್ರೋಶದ ಛಾಯೆಯು ಹೊಮ್ಮುವುದನ್ನು ತಿಳಿಯಬಹುದಾಗಿದೆ.

ನಸೀಮಳು ತನ್ನ ತಾಯಿಯ ಮನೆಯಲ್ಲಿದ್ದಾಗ, ಮಕ್ಕಳನ್ನು ಕರೆದುಕೊಂಡು ಬಾ ಎಂದಾಗ, ತಾಯಿ ಸಕೀನ "ಸೀಮಾ, ನಾನೊಂದು ಮಾತೆನ್ನುತ್ತೇನೆ. ನೀನು ಸಿಟ್ಟಗೇಳಬಾರದು ಎಂದು ಮಾತು ನಿಲ್ಲಿಸಿದಳು. ತಾಯಿಯ ಮಾತಿನ ಅರ್ಥ ತಿಳಿಯದೆ ಸುಮ್ಮನೆ ಮೌನವಾಗಿ ಇದ್ದಾಗ ತಾಯಿ ಸಕೀನ "ನಾನು ಹೋಗಿ ಇಕ್ಬಾಲನನ್ನು, ಅವರು ಕಳಿಸಿದರೆ ಕರಕೊಂಡು ಬರುತ್ತೇನೆ. ರೋಸಿ ಅಲ್ಲೇ ಇರಲಿ. ಹೆಣ್ಣು ಮಗುವಿನ ಜವಾಬ್ದಾರಿ ನಮಗೇಕೆ ಇಕ್ಬಾಲ್ ಗಂಡು ಹುಡುಗ. ನಾಳೆ ಕಷ್ಟಸುಖಕ್ಕೆ ಆಗುತ್ತಾನೆ" ಈ ಮಾತನ್ನು ಕೇಳಿದಾಗ ನಸೀಮಳು "ಉಮ್ಮಾ, ನಾನೂ ಹೆಣ್ಣು, ನೀನು ಹೆಣ್ಣು, ಹೀಗಿದ್ದೂ ನೀನೇ ಹೆಣ್ಣು ಬೇಡ, ಗಂಡುಮಗುವನ್ನು ನಾವಿಟ್ಟುಕೊಳ್ಳೋಣ ಎನ್ನುತ್ತಿಯಲ್ಲ? ನೀವೆಲ್ಲ ಕಾಡಿನಲ್ಲಿ ಹುಟ್ಟಬೇಕಾದವರು. ಮರೆತು. ನಿಮ್ಮನ್ನೆಲ್ಲ ಆ ಸರ್ವ ಶಕ್ತನು ನಾಡಿನಲ್ಲಿ ಹುಟ್ಟಿಸಿದ್ದಾನೆ. ನೀನಿಷ್ಟು ಹೇಳುವುದಾದರೆ ನಾನೂ ಒಂದು ಮಾತನ್ನುತ್ತೇನೆ. ಇಬ್ಬರ ಭಾರ ನಮ್ಮಿಂದ ಹೊರಲಾರದು ಎಂದು ನಿನಗೆ ಅನ್ನಿಸುವುದಾದರೆ, ನನಗೆ ಗಂಡುಮಗು ಬೇಡ. ರೋಸಿಯನ್ನು ಕರಕೊಂಡು ಬಾ. ಇಕ್ಬಾಲ್ ಅವರ ಬಳಿಯಲ್ಲಿರಲಿ."[18] ಎಂದು ಹೇಳಿದಾಗ ಸಕೀನ ಅಪ್ರತಿಭಳಾದಳು. ಮಗ ಬೇಡ, ಮಗಳು ಬೇಕು ಎಂದು ಯಾರಾದರೂ ಹೇಳುತ್ತಾರೆಯೇ? ಎಂದು ಗಂಡು ಮಗುವಿನ ಬಗೆಗಿನ ಹಂಬಲವನ್ನು ವ್ಯಕ್ತಪಡಿಸಿದಳು. ಹೆಣ್ಣಾಗಿ ಹುಟ್ಟಿದಂತಹ ಕತೀಜಮ್ಮ, ಜಮೀಲಾ ಹೆಣ್ಣನ್ನೇ ನಿಕೃಷ್ಟವಾಗಿ ಕಾಣುವರು. ಇಂತಹ ಮನಸ್ಸುಗಳು ಮುಸ್ಲಿಂ ಸಮುದಾಯದಲ್ಲಿರುವಂತೆ ಎಲ್ಲಾ ಸಮುದಾಯದ ವರ್ಗದವರಲ್ಲಿಯೂ ಇರುವುದನ್ನು ಕಾಣಬಹುದಾಗಿದೆ. 'ಹೆಣ್ಣು ಪೆಣ್ಣೆಂದೇಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು?'[19] ಎಂಬ ಸಂಚಿ ಹೊನ್ನಮ್ಮಳು ಹದಿಬದೆಯ ಧರ್ಮದಲ್ಲಿ ಹೆಣ್ಣಿನ ಬಗೆಗೆ ನಿಲುವು ಪಡೆದಿರುವುದು ವ್ಯಕ್ತವಾಗುತ್ತದೆ.

ಮುಸ್ಲಿಂ ಸಮುದಾಯದ ವ್ಯಕ್ತಿಯು ಭಾಷಣ ಮಾಡುತ್ತಾ 'ನಮ್ಮ ಮಹಿಳೆಯರನ್ನು ನಾವು ಹೂವಿನಂತೆ ಕಾಪಾಡಿಕೊಳ್ಳುತ್ತೇವೆ: ವಜ್ರದಂತೆ ರಕ್ಷಿಸಿಕೊಳ್ಳುತ್ತೇವೆ. ಎಂದೆಲ್ಲಾ ಹೇಳುವರು'[20] ಆದರೆ ಕಾಸರಗೋಡಿನ ಮುಸ್ಲಿಂ ಮಹಿಳೆಯರು ತಿರಸ್ಕಾರಕ್ಕೆ ಒಳಪಟ್ಟಿದ್ದು. ಪುರುಷರು ತಮಗೆ ಬೇಕಾದ ಹಾಗೆ ಆಕೆಯನ್ನು ಹತೋಟಿಯಲ್ಲಿ ಇಟ್ಟುಕೊಂಡಿರುವುದು ಸಾರಾ ಅವರ 'ವಜ್ರಗಳು' ಕಾದಂಬರಿಯಲ್ಲಿ ಕಂಡುಬರುತ್ತದೆ.

'ವಜ್ರಗಳು' ಕಾದಂಬರಿಯಲ್ಲಿ ನಫೀಸಾಳು ತನ್ನ ಬಾಲ್ಯದಲ್ಲಿ ತನ್ನ ಗೆಳೆಯ ಶಫೀಯುಲ್ಲನ ಜೊತೆ ಬೆಕ್ಕಿನ ಮರಿಗಳನ್ನು ಹುಡುಕಲು ಹೋಗಿ ಮನೆಗೆ ತಡವಾಗಿ ಬಂದಾಗ ಮೊದಲು ತಾಯಿಯ ಬೈಗುಳವನ್ನು ಕೇಳುವಳು. 'ಎಂಟು ವರ್ಷದ ಹುಡುಗಿ ಆ ಹುಡುಗನೊಡನೆ ಊರೆಲ್ಲ ಸುತ್ತುವುದೆ? ಮಾನ, ಮಾರ್ಯದೆ ಒಂದೂ ಇಲ್ಲವೆ?'[21] ಎಂದೆಲ್ಲ ತಾಯಿ ಬೈದಿದ್ದಳು. ಅಂದರೆ ಬಾಲ್ಯದ ವಯಸ್ಸಿನ ಮಕ್ಕಳಲ್ಲಿಯೂ ಸಹ ಲಿಂಗ ತಾರತಮ್ಯವನ್ನು ಮಾಡುವ ಬಗೆಯು ಕಂಡುಬರುತ್ತದೆ. ಉಸ್ಮಾನರ ಕುಟುಂಬದಲ್ಲಿ ಲಿಂಗತಾರತಮ್ಯವನ್ನು ಮಾಡದೇ ಎಲ್ಲ ಗಂಡು-ಹೆಣ್ಣು ಭೇದವಿಲ್ಲದೆ ಹುಟ್ಟಿದ ಮೊಮ್ಮಕ್ಕಳಿಗೆಲ್ಲ ಚಿನ್ನದ ಉಡಿದಾರ ತೊಡಿಸುವುದು ಅಲ್ಲದೆ ಅಡಿಗೆಯ ವಿಷಯದಲ್ಲಿಯೂ ಹೆಂಡತಿಯ ಒಪ್ಪಿಗೆಯನ್ನು ಪಡೆಯುವಂತಹ ಗಂಡಿನ ಮನಸ್ಥಿತಿಯನ್ನು ಕಾಣಬಹುದಾಗಿದೆ.

ಸಾರಾ ಅವರ ಕಾದಂಬರಿಗಳಲ್ಲಿ ಗಂಡು-ಹೆಣ್ಣೆಂದು ಭೇದವನ್ನು ಮಾಡಿದರೆ, ಮತ್ತೊಂದೆಡೆ ಭೇದವನ್ನು ಮಾಡದೇ ಸಮಾನತೆಯ ನೆಲೆಯಿಂದ ನೋಡುವ ಬಗೆಯ ದೃಷ್ಟಿಕೋನವು ಇರುವುದು ವ್ಯಕ್ತವಾಗುತ್ತದೆ.

## 2. ಲೈಂಗಿಕ ರಾಜಕಾರಣ:

ರಾಜಕಾರಣವೆನ್ನುವುದು ಅಧಿಕಾರ-ಅನಧಿಕಾರಗಳ ನಡುವಣ ಸಂಬಂಧದ ನಿರ್ವಚನವಾಗಿದೆ. ಆಳುವ ವರ್ಗ ಮತ್ತು ಆಳಿಸಿಕೊಳ್ಳುವ ವರ್ಗದ ನಡುವೆ ಇರುವ ಸಂಬಂಧವನ್ನು ರಾಜಕಾರಣವು ವ್ಯಾಖ್ಯಾನಿಸುತ್ತದೆ. ಒಂದು ಗುಂಪು ಮತ್ತೊಂದು ಗುಂಪಿನ ಮೇಲೆ ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ಮೇಲೆ ಹಿಡಿತ ಸಾಧಿಸುವುದನ್ನು ರಾಜಕಾರಣವು ಚರ್ಚಿಸುತ್ತದೆ. ಈ ಸಂಗತಿಗಳ ಹಿಂದಿರುವ ನ್ಯಾಯ ಮತ್ತು ಕಾನೂನನ್ನು ಅದು ವಿವೇಚಿಸಲು ಪ್ರಯತ್ನಿಸುತ್ತದೆ. ಲೈಂಗಿಕ ರಾಜಕಾರಣವೆಂದರೆ ಲೈಂಗಿಕ ವ್ಯತ್ಯಾಸದ ಕಾರಣದಿಂದಲೇ ಒಬ್ಬರ ಮೇಲೆ ಮತ್ತೊಬ್ಬರು ಅಧಿಕಾರ ವ್ಯತ್ಯಾಸದ ಕಾರಣದಿಂದಲೇ ಒಬ್ಬರ ಮೇಲೆ ಮತ್ತೊಬ್ಬರು ಅಧಿಕಾರ ನಡೆಸುವುದು. ಇದರಿಂದ ಒಂದು ವರ್ಗವು (ಅಧಿಕಾರಕ್ಕೆ ಒಳಗಾದ ವರ್ಗ) ಮಾನಸಿಕ ಒತ್ತಡಕ್ಕೆ ಗುರಿಯಾಗುತ್ತದೆ. ಈ ದೃಷ್ಟಿಯಿಂದಲೇ ಅಧಿಕಾರದ ಸಂರಚನೆಗೂ ಲೈಂಗಿಕ ವ್ಯತ್ಯಾಸಕ್ಕೂ ಸಂಬಂಧವಿದೆ. 'ಲೈಂಗಿಕ ರಾಜಕಾರಣವು ಲೈಂಗಿಕ ಯಜಮಾನಿಕೆಯ ಅಂಶವನ್ನು ಒಳಗೊಂಡಿದ್ದು, ಅದು ಮೂಲಭೂತವಾದ ಅಧಿಕಾರದ ಪರಿಕಲ್ಪನೆಯಾಗಿದೆ' ಎಂದು ಕೇಟ್ ಮಿಲ್ಲೆಟ್ ಹೇಳುತ್ತಾರೆ.[22] ಫುಕೋ ಕೂಡ ಒಂದು ಸಂದರ್ಭದಲ್ಲಿ ಹೀಗೆ ಹೇಳುತ್ತಾನೆ. 'ಲೈಂಗಿಕ ವ್ಯತ್ಯಾಸವು ಅಧಿಕಾರದ ವರ್ಗಾವಣೆಯ ಪ್ರಮುಖ ಅಂಶಗಳಲ್ಲಿ ಒಂದು. ಅಧಿಕಾರವೆನ್ನುವುದು ಗಂಡು-ಹೆಣ್ಣು, ಯುವಕರು. ಮುದುಕರು, ಪಾಲಕರು ಮತ್ತು ಮಕ್ಕಳು, ಆಡಳಿತ, ವರ್ಗ ಮತ್ತು ಸಾಮಾನ್ಯ ಜನತೆಯ ನಡುವೆ ಹರಿ ಹಂಚಾಗಿ ಹೋಗುತ್ತದೆ'.[23] ಈ ದೃಷ್ಟಿಯಿಂದಲೇ ಗಂಡು ಅಧಿಕಾರದ ಸಂಕೇತವಾದರೆ, ಹೆಣ್ಣು ಶೋಷಿತ ವರ್ಗದ ಪ್ರತಿನಿಧಿಯಾಗಿರುತ್ತಾಳೆ. ಗಂಡು ಮತ್ತು ಹೆಣ್ಣಿನ ನಡುವೆ ಇರುವ ರಾಜಕಾರಣವು ಕೂಡ ದೃಶ್ಯ ಮತ್ತು ಭಾವನಾತ್ಮಕ ಸಂಗತಿಗಳ ನಡುವೆ ರೂಪುಗೊಂಡಿರುತ್ತದೆ. ಪಿತೃರೂಪಿ ಸಂಸ್ಕೃತಿಯು ಸ್ತ್ರೀ ವರ್ಗದ ಮೇಲೆ ಅಧಿಕಾರವನ್ನು ಸ್ಥಾಪಿಸಿಕೊಳ್ಳುತ್ತದೆ ಮತ್ತು ಸ್ತ್ರೀಯು ಗುಲಾಮ ಶಕ್ತಿಯ ಪ್ರಾತಿನಿಧಿಕ ರೂಪವಾಗಿದ್ದಾಳೆ. ಲೈಂಗಿಕ ವ್ಯತ್ಯಾಸವೆನ್ನುವುದನ್ನು ಕಾಲಾಂತರದಲ್ಲಿ ಅಧಿಕಾರ ಮತ್ತು ಅನಧಿಕಾರಗಳ ವ್ಯತ್ಯಾಸವೆಂಬಂತೆ ಬಳಸಲಾಯಿತು.

ಸ್ತ್ರೀವಾದದ ಪ್ರಕಾರ ಬಂಡವಾಳಶಾಹಿ ಜಗತ್ತು ಮತ್ತು ಪಿತೃರೂಪಿ ಸಂಸ್ಕೃತಿಯ ಜಗತ್ತು ಎರಡೂ ಬೇರೆ ಬೇರೆ ರೀತಿಯ ಮಾನಸಿಕ ಒತ್ತಡಗಳನ್ನು ನಿರ್ಮಿಸುತ್ತವೆ. ಪಿತೃರೂಪಿ ಸಂಸ್ಕೃತಿಯಲ್ಲಿ ಪುರುಷನನ್ನು ಉನ್ನತ ದರ್ಜೆಯವನೆಂದು, ಸ್ತ್ರೀಯನ್ನು ಕೆಳದರ್ಜೆಯವಳೆಂದು ಅಂಗೀಕರಿಸಲಾಗುತ್ತದೆ. ಇದರಿಂದಲೇ ತರತಮ ವ್ಯತ್ಯಾಸಗಳು ಉಂಟಾಗುತ್ತವೆ. ಈ ರೀತಿಯ ತರತಮಗಳಲ್ಲಿ ಅನೇಕ ಮಾದರಿಗಳಿರುತ್ತವೆ.

ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಲ್ಲಿ ಲೈಂಗಿಕ ರಾಜಕಾರಣವು ವಾಸ್ತವದ ಸಂಗತಿಗೆ ಸಂಬಂಧ ಪಟ್ಟಿರುವುದು ಆಗಿರುತ್ತದೆ. 'ಸಹನಾ', 'ಚಂದ್ರಗಿರಿ ತೀರದಲ್ಲಿ' ಕೃತಿಗಳಲ್ಲಿ ಲೈಂಗಿಕ ರಾಜಕಾರಣದ ಮುಖಗಳನ್ನು ಬೇರೆ ಬೇರೆ ನೆಲೆಗಳಲ್ಲಿ ಇರುವುದು ತಿಳಿಯುತ್ತದೆ. ಲೈಂಗಿಕ ವ್ಯತ್ಯಾಸವೆನ್ನುವುದು ಬರಿಯ ಹೊಟ್ಟೆಯ ಮತ್ತು ಬಟ್ಟೆಯ ಪ್ರಶ್ನೆಯಲ್ಲ. ಅದು ಮನಸ್ಸಿಗೆ ಸಂಬಂಧಿಸಿದ್ದು.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಮಹಮ್ಮದ್ ಖಾನ್ ಮದುವೆಯಾಗುವುದಕ್ಕೆ ಮುಂಚೆ ಕಾಳೀ ಎಂಬ ಹೆಣ್ಣನ್ನು ನೋಡಿ ಪ್ರಕೃತಿಯ ವ್ಯಾಮೋಹಕ್ಕೆ ಸಿಲುಕಿದಾಗ ಕಾಳೀಯ ತಂದೆ ಬಂದು ಖಾನ್ ತಂದೆಯೊಡನೆ 'ಏನ್ಸಾಮಿ, ನಿಮ್ಮ ಮಗನಿಗೆ ಮದುವೆ ಯೋಚನೆ ಮಾಡೋದಿಲ್ಲವಾ? ಹೆಣ್ಣು ಹುಡಕ್ಕೊಂಡು ನಮ್ಗುಡಿಸಲಿಗೆ ಬಂದಿದ್ದಾರಲ್ಲ ಚಿಕ್ಕ ಸಾಮೇರು? ಅದು ಪ್ರಕೃತಿ ಸ್ವಾಮಿ. ಪ್ರಕೃತೀನ ತಡೆದು ನಿಲ್ಸೋಕಾಗುತ್ತದಾ? ಮಗನಿಗೆ ಬೇಗ ಮದುವೆ ಮಾಡಿ!'[24] ಎಂದು ಇನ್ನೂ ಏನೇನೋ ಗೊಣಗುತ್ತಾ ಮಾತನಾಡುತ್ತಾ ಅಲ್ಲಿಂದ ತೆರಳಿದ್ದನು. ಬುದ್ಧಿ ಸ್ವಾಧೀನದಲ್ಲಿದ್ದಾಗ ಆಡಲಾಗದ ಮಾತುಗಳನ್ನು ಕುಡಿತದ ಆಮಲಿನಲ್ಲಿ ಆಡಿದ್ದನು! ಅದೇ ಪ್ರಕೃತಿ ತನ್ನ ಮಗಳನ್ನು ಕಾಡಿಸುತ್ತಿದೆ ಎಂದು ಮಾತ್ರ ಆತನಿಗೆ ಹೊಳೆದಿರಲೇ ಇಲ್ಲ! ಈ ರೀತಿಯಲ್ಲಿ ಪ್ರಕೃತಿಯ ಬಲೆಗೆ ಸಿಲುಕಿ ಮಹಮ್ಮದ್ ಖಾನರ ಮನಸ್ಥಿತಿಯು ಲೈಂಗಿಕತೆಯ ಒಂದು ಬಗೆಯಾದರೆ, ಮತ್ತೊಂದೆಡೆ ಫಾತಿಮ್ಮಳನ್ನು ಮದುವೆಯಾದಾಗ ಆಕೆಯನ್ನು ಪ್ರೀತಿಯಿಂದ ಮಾತನಾಡಿ ಆಕೆಯ ಮನಸ್ಸನ್ನು ಮೊದಲು ತನ್ನ ಕಡೆಗೆ ಸೆಳೆದು ನಂತರ ತನ್ನ ಆಸೆಯನ್ನು ಈಡೇರಿಸಿಕೊಳ್ಳದೆ ಮಹಮ್ಮದ್ ಖಾನರ ಮನದಲ್ಲಿ ಕಾಳಿಯು ಮೀಯುತ್ತಿದ್ದ ದೃಶ್ಯಗಳೆಲ್ಲವೂ ಹಚ್ಚ ಹಸುರಾಗಿಯೇ ಇದ್ದುದರಿಂದ ಹೆಂಡತಿ ಕೈಗೆ ದೊರೆತೊಡನೆ ಏನೇನು ಮಾಡಬೇಕೆಂಬುದನ್ನು ಅವರಾಗಲೇ ಹಲವು ಬಾರಿ ಕನಸು ಕಂಡ ಬಗೆಯು ತಿಳಿಯುವುದು.

ಫಾತಿಮ್ಮಳನ್ನು ಕಂಡೊಡನೆ ಹುಲಿಯಂತೆ ಅವಳ ಮೇಲೆರಗಿದರು. ಅವರ ದೇಹವನ್ನು ತಣಿಸಲು ಒಂದು ಹೆಣ್ಣು ದೇಹ ಸಾಕಾಗಿತ್ತೇನೋ ಆಕೆಯಿನ್ನೂ ಚಿಕ್ಕ ಹುಡುಗಿ ಎಂಬುದನ್ನು ಅವರು ಗಮನಿಸುವ ಸ್ಥಿತಿಯಲ್ಲಿರಲಿಲ್ಲ. ತನ್ನ ಮೇಲೆ ಈ ರೀತಿ ಆಕ್ರಮಣವಾದಾಗ ಫಾತಿಮ್ಮ ಭಯದಿಂದ ಚೀರಬೇಕೆಂದು ಬಾಯಿ ತೆರೆದಳು. ಖಾನರು ಆಕೆಯ ಬಾಯಿಯನ್ನು ಕೈಯಿಂದ ಮುಚ್ಚಿ 'ಬಾಯಿ ತೆರೆದರೆ ಕುತ್ತಿಗೆ ಹಿಸುಕಿ ಕೊಂದುಬಿಡುತ್ತೇನೆ. ನಾನು ಹೇಳಿದಂತೆ ಕೇಳಿಕೊಂಡು ಬಿದ್ದಿರು!'[25] ಎಂದು ತಮ್ಮ ಒರಟು ಧ್ವನಿಯನ್ನು ಆದಷ್ಟು ತಗ್ಗಿಸಿ ಗದರಿದರು. ಈ ರೀತಿಯ ಗಂಡನ ಅನರೀಕ್ಷಿತವಾದ ನಡವಳಿಕೆಯಿಂದ ಫಾತಿಮ್ಮಳ ವೈವಾಹಿಕ ಬದುಕಿನ ಸಂತೋಷ ಒಂದೇ ಕ್ಷಣದಲ್ಲಿ ಮರೆಯಾಯಿತು. ಆಘಾತಗೊಂಡ ಆಕೆ ಕಟ್ಟಿಗೆಯಂತೆ ಹಾಸಿಗೆಯ ಮೇಲೆ ಬಿದ್ದುಕೊಂಡಳು. ತನ್ನ ದೇಹದ ಮೇಲಾಗುತ್ತಿದ್ದ ದಾಳಿಯನ್ನು ಸಹಿಸಿಕೊಳ್ಳಲು ಆಕೆ ಸರ್ವ ಸಾಹಸ ಮಾಡುತ್ತಿದ್ದಳು. ನೋವಿನಿಂದ ನರಳಿದ ನರಳಿಕೆ ಹೊರ ಬರದಿರಲು ತಾನೇ ಬಾಯಿಯನ್ನು ಒತ್ತಿ ಹಿಡಿದಳು. ಅಂತೂ ಆ ಕ್ರಿಯೆ ಮುಗಿದಾಗ ಆಕೆಗೆ ಸತ್ತು ಬದುಕಿದ ಅನುಭವವಾಗಿತ್ತು. ತನ್ನದೇ ಆಗಿದ್ದ ಸ್ವತ್ತನ್ನು ಸ್ವಾಧೀನಪಡಿಸಿಕೊಳ್ಳಲು ಗಂಡು ಬಲ ಪ್ರಯೋಗ ಮಾಡಬೇಕಾದ ಅಗತ್ಯವೇ ಇರಲಿಲ್ಲ. ಒಂದಿಷ್ಟು ಸಹನೆ, ನಲ್ಮೆಯ ಒಂದೆರಡು ನುಡಿಗಳು ಒಂದೆರಡು ಹಾಸ್ಯ ಮಾತುಗಳೇ ಆ ಪುಟ್ಟ ಹೆಣ್ಣು ಜೀವವನ್ನು ವಶ ಪಡಿಸಿಕೊಳ್ಳಲು ಧಾರಾಳ ಸಾಕಿತ್ತು. ಆದರೆ ಪುರುಷರು ಲೈಂಗಿಕ ವಿಷಯ ಬಂದಾಗ ಹೆಣ್ಣಿನ ಅಭಿಪ್ರಾಯವನ್ನು ಕೇಳದೇ ಅಧಿಪತ್ಯವನ್ನು ನಡೆಸುವುದು ಕಂಡುಬರುತ್ತದೆ.

ನಾದಿರಾಳು ಮದುವೆಯಾಗಿ ರಶೀದ್‌ನ ಕೋಣೆಗೆ ಹೋದಾಗ ಆಕೆಯ ಮನಸ್ಸಿನಲ್ಲಿ ವೈವಾಹಿಕ ಜೀವನ ಹೇಗಿರುತ್ತದೆ ಎಂಬ ಕಲ್ಪನೆಯೆ ಇಲ್ಲದೆ ಇರುವಂತಹ ಸಂದರ್ಭದಲ್ಲಿ ಇನ್ನೇನು ತನ್ನ ಮೈ ಮೇಲೆ ಹುಲಿಯೊ ಕರಡಿಯೊ ಹಾರಿ ಬೀಳಬಹುದೆಂದು ಭಯದಿಂದ ಕಂಗಾಲಾಗಿದ್ದವಳಿಗೆ ಈ ಬಹು ಮೆತ್ತಗಿನ 'ನಾದಿರಾ' ಎಂದು ಬಹಳ ಮೆತ್ತಗೆ ಆಕೆಯ ಹೆಸರನ್ನುಚ್ಚರಿಸಿದ್ದನ್ನು ಕಿವಿಗೆ ತಂಪನ್ನೆರೆಯುವ ಸ್ವರ ಕಿವಿಗೆ ಬಿದ್ದಾಗ ಆ ಕರೆ ತೀರಾ ಅನಿರೀಕ್ಷಿತವಾಗಿದ್ದ ಅವಳಿಗೆ ಏನು ಮಾಡಬೇಕೆಂದು ಹೊಳೆಯಲಿಲ್ಲ. ಅಳುವ ಬಿಕ್ಕಳಿಗೆ ನಿಂತಿತು. 'ನನ್ನನ್ನು ಕಂಡರೆ ಭಯವೇ? ನಾನೇನು ಹುಲಿಯೇ?'[26] ಎಂದು ಹೆಂಡತಿಯ ಮನಸ್ಸನ್ನು ಮೊದಲು ತನ್ನ ಕಡೆಗೆ ಸೆಳೆದು ನಂತರ ತನ್ನ ಆಸೆಯನ್ನು ಈಡೇರಿಸಿಕೊಳ್ಳಬಹುದೆಂದು ಯೋಚಿಸಿದ ಬಗೆಯನ್ನು ಕಾಣಬಹುದಾಗಿದೆ. ಹೂವಿನಂತೆ ಕೋಮಲವಾದ ಹೆಣ್ಣೊಂದು ತನ್ನ ಆಲಿಂಗನದಲ್ಲಿ ಮೈ ಮರೆತಿದ್ದಾಗ ಆತನ ದೈಹಿಕ ಬಯಕೆ ಜಾಗೃತಗೊಂಡು ಸಹನೆ ಸಡಿಲಗೊಳ್ಳುತ್ತಿತ್ತು. ಆದರೆ ಆಗ ತಾನೇ ಗೆದ್ದುಕೊಂಡ ಆ ಪುಟ್ಟ ಹೆಣ್ಣಿನ ಹೃದಯದಲ್ಲಿ ಗೊಂದಲ ಹುಟ್ಟಿಸಿ ಭೀತಿ ಮೂಡಿಸಲಿಚ್ಛಿಸದೆ ತನ್ನ ಬಯಕೆಗೆ ಬಲವಂತದಿಂದ ಕಡಿವಾಣ ಹಾಕಿ ಸಂಯಮ ತಂದು ಕೊಂಡನು. ಎಂದಿದ್ದರೂ ಆಕೆ ತನ್ನವಳೇ ಅಲ್ಲವೆ? ಇಂದಲ್ಲದಿದ್ದರೆ ನಾಳೆ ಆಕೆಯನ್ನು ರಮಿಸಿ ತನ್ನವಳಾಗಿಸಿಕೊಂಡರಾಯಿತು. 'ಬಾಳು ಪೂರ್ತಿ ಜೊತೆಯಲ್ಲಿರುವಾಗ ಒಂದು ದಿನ ತಡವಾದರೇನು? ತಾನು ಅವಸರಪಟ್ಟು ದುಡುಕಿ ಆಕೆ ಮನಸ್ಸು ಕಹಿ ಮಾಡಿಕೊಳ್ಳುವಂತಾಗಬಾರದಲ್ಲ?'[27] ಈ ರೀತಿಯ ಮನಸ್ಥಿತಿಯು ಹೆಣ್ಣಿನ ಬಗೆಗೆ ತಳೆದಿರುವಂತಹ ಬಗೆಯನ್ನು ಸಾರಾ ಅವರು ಚಿತ್ರಿಸಿದ್ದಾರೆ.

'ಸಹನಾ' ಕಾದಂಬರಿಯಲ್ಲಿ ನಸೀಮ ಮದುವೆ ಆಗಿ ಪಾಷಾನ ಮನೆಗೆ ಹೋಗಿ ಕುಟುಂಬ ನಿರ್ವಹಣೆಯನ್ನು ದಿನನಿತ್ಯ ಮಾಡಿ ರಾತ್ರಿಯ ವೇಳೆ ಆಯಾಸವಾಗಿ ಮಲಗಲು ಕೋಣೆಗೆ ಹೋದಾಗ ಪಾಷಾ 'ಬಾ ಇನ್ನು ಮಲಗೋಣ'[28] ಎಂದು ದೀಪವಾರಿಸಿ ಅವಳನ್ನು ತಬ್ಬಿಕೊಂಡಾಗ ಇವತ್ತು ಬೇಡಿ, ನನಗೆ ತುಂಬ ಆಯಾಸವಾಗಿದೆ ಎಂದು ಹೇಳಬೇಕೆಂದು ಬಾಯಿ ತೆಗೆದಳು. ಮಾತು ಗಂಟಲಲ್ಲಿ ಉಳಿಯಿತು. ಒರಟು ಕೈ ದೇಹವನ್ನು ಬರಸೆಳೆದು ಅಪ್ಪಿತು: ತುಟಿ ಕೆನ್ನೆಗಳ ಮೇಲೆ ಓಡಾಡತೊಡಗಿತು. ಹೋರಾಡಲು ಶಕ್ತಿ ಇಲ್ಲದೆ ದೇಹ ನಿಶ್ಚೇಷ್ಟಿತವಾಯಿತು. ಕೋಣೆಯಲ್ಲಿ ಬಿದ್ದಿದ್ದ ಚಂದ್ರನ ಮಂದ ಪ್ರಕಾಶದಲ್ಲಿ ಹದ್ದಿನಂತೆ ತನ್ನ ಮೇಲೆರಗಿ ತನ್ನನ್ನು ಹಿಂಸಿಸುತ್ತಿದ್ದಾತನನ್ನು ಆಕೆ ಕಣ್ಣು ಬಿಟ್ಟು ಭಯದಿಂದ ನೋಡಿದಳು. ಕಣ್ಣೀರು ತಲೆದಿಂಬನ್ನು ತೋಯಿಸುತ್ತಿತ್ತು. ಆಕೆಯನ್ನು ಕಂಡು ಪಾಷಾ ಈ ರೀತಿಯಲ್ಲಿ ಹೇಳುವನು. "ಥತ್, ಎಂತಹ ಹುಡುಗಿ ನೀನು? ನನ್ನನ್ನು ಒಂದಷ್ಟು ಹೊತ್ತು ತಡೆದುಕೊಳ್ಳಲೂ ಶಕ್ತಿ ಇಲ್ಲವೆ? ನನ್ನ ಗೆಳೆಯರು ಏನೇನೋ ಹೇಳಿ ಹಾಸ್ಯ ಮಾಡಿದ್ದರು. ಇಲ್ಲಿ ಮನೆಗೆ ಬಂದರೆ ಹೀಗೆಯೇ ನನ್ನನ್ನು ಸ್ವಾಗತಿಸುವುದು? ನಾನು ಎಷ್ಟೊಂದು ಹೆದರಿಬಿಟ್ಟೆನಲ್ಲ! ಆತನ ಮಾತಿನಲ್ಲಿ ಒರಟುತನವಿರಲಿಲ್ಲ. ಪಕ್ಕದಲ್ಲಿ ಕುಳಿತು ಮೃದುವಾಗಿ ನಸೀಮ ತಲೆ ನೇವರಿಸುತ್ತಾ ಆತನು ಈ ಮಾತನ್ನೆಂದಾಗ ಆಕೆ ತನಗಾದ ನೋವನ್ನು ಮರೆತಳು".[29] ಈ ರೀತಿಯಾಗಿ ಪ್ರೀತಿಯಿಂದ ಹೆಂಡತಿಯ ಜೊತೆ ಮಾತನಾಡಿ ತನ್ನ ಆಸೆಯನ್ನು ಈಡೇರಿಸಿಕೊಳ್ಳುವ ಬಗೆಯನ್ನು ತಿಳಿಯಬಹುದಾಗಿದೆ.

ನಸೀಮಳ ಮಗಳು ಬೇಬಿ ಮರಣ ಹೊಂದಿ ಕೆಲವು ದಿನಗಳಾದ ನಂತರ ಪಾಷಾನು ಆಕೆಯನ್ನು ಬಯಸಿದನು. ಆದರೆ ಮಗುವಿನ ಮರಣದ ನಂತರ ಅವಳು ದೈಹಿಕ ಸುಖದ ವಿಷಯದಲ್ಲಿ ತೀರ ವಿಮನಸ್ಕಳಾಗಿದ್ದಳು: ಅವಳ ಮಾನಸಿಕ ಸ್ಥಿತಿಯಾಗಲಿ ದೈಹಿಕ ಪರಿಸ್ಥಿತಿಯಾಗಲಿ ಅವನ ಕೋರಿಕೆಯನ್ನು ಈಡೇರಿಸಲು ಅಸಮರ್ಥವಾಗಿತ್ತು. ನಿರುತ್ಸಾಹದಿಂದ ಆಕೆ ಮುಖ ತಿರುಗಿಸಿ ಮಲಗಿದಳು. "ನಸೀಮಾ...." ಮೃದುವಾಗಿ ಆಕೆಯನ್ನು ಕರೆಯುತ್ತಾ ಆಕೆಯನ್ನು ತನ್ನತ್ತ ತಿರುಗಿಸಲು ಪ್ರಯತ್ನಿಸಿದನು ಪಾಷಾ.

ಮೌನವಾಗಿ ಆಕೆ ಮಲಗಿಯೇ ಇದ್ದಳು. ಒಂದೆರಡು ಬಾರಿ ಆಕೆಯನ್ನು ತನ್ನತ್ತ ತಿರುಗಿಸಲು ಪ್ರಯತ್ನಿಸಿ ಸೋತವನಿಗೆ ಸಹನೆ ಮೇರೆ ಮೀರಿತು. ಬಳಲಿ ಬಂದಿದ್ದ ಆತನಿಗೆ ಆ ದಿನ ಏನಾದರೂ ಮನರಂಜನೆ ಬೇಕೇ ಬೇಕೆನಿಸಿತ್ತು. ಹಣ ಖರ್ಚಿಲ್ಲದೆ ಬಡವರಿಗೆ ದೊರೆಯುವ ಮನರಂಜನೆ ಇದೊಂದೆ ಅಲ್ಲವೇ? ಹೆಂಡತಿಯ ವಿರೋಧವನ್ನು ಆ ದಿನ ಆತನು ಲೆಕ್ಕಿಸುವ ಸ್ಥಿತಿಯಲ್ಲಿರಲಿಲ್ಲ. ಊರಿನಲ್ಲಿ ಯಾವ ತಾಯಿಯೂ ಮಗುವನ್ನು ಕಳೆದು ಕೊಂಡಿಲ್ಲವೇ ಮಗು ತನ್ನದೂ ಅಲ್ಲವೆ? ಆದರೆ ತಾನು ಹೀಗೆ ಅಳುತ್ತಾ ಎಲ್ಲವನ್ನೂ ಮರೆತು ಕುಳಿತ್ತಿದ್ದೇನೆಯೇ? ಮಗು ಹೋಯಿತೆಂದು ಇವಳು ತನ್ನನ್ನೇ ದೂರ ಮಾಡುತ್ತಿದ್ದಾಳಲ್ಲ? ತನಗಾದರೂ ಬದುಕಿನಲ್ಲಿ ಬೇರೇನು ಸುಖವಿದೆ? ಆ ದಿನ ಆತನಿಗೆ ಅವಳು ಬೇಕೇ ಬೇಕೆನಿಸಿತು ಇನ್ನೆಷ್ಟು ದಿನ ಹೆಣ್ಣಿನ ಸಂಗವಿಲ್ಲದೆ ಇರಬೇಕು? ಹೆಂಡತಿ ಬಳಿಯಲ್ಲಿ ಮಲಗಿರುವಾಗಲೂ ತಾನು ಸನ್ಯಾಸಿಯಂತಿರಬೇಕಾದರೆ ಹೇಗೆ?[30] ಬಲವಂತವಾಗಿ ಅವಳನ್ನು ತನ್ನೆಡೆಗೆ ಸೆಳೆದು ಬಿಗಿದಪ್ಪಿಕೊಂಡು ತುಟಿಯ ಮೇಲೆ ಚುಂಬನದ ಮಳೆಗರೆದನು. ಅವಳು ಗಂಡನಿಂದ ಈ ಬಗೆಯ ದಾಳಿಯನ್ನು ನಿರೀಕ್ಷಿಸಿರಲಿಲ್ಲ. ಸಾಧ್ಯವಾದಷ್ಟು ಕೊಸರಾಡಿದಳು. ಆದರೆ ಮಾನಸಿಕ ಯಾತನೆಯಿಂದ ಹೆಣ್ಣಾದವಳಿಗೆ ದೈಹಿಕವಾಗಿಯೂ ತುಂಬ ನಿಶ್ಯಕ್ತಳಾಗಿದ್ದವಳಿಗೆ ಗಂಡನೊಡನೆ ಹೆಚ್ಚು ಹೊತ್ತು ಹೆಣಗುವುದು ಸಾಧ್ಯವಾಗಲಿಲ್ಲ. ಅವಳು ನಿರ್ಜೀವ ಶವದಂತೆ ಬಿದ್ದುಕೊಂಡಳು. ಆತನು ತನ್ನಾಸೆಯನ್ನು ಹಿಂಗಿಸಿಕೊಂಡು ಗೊರಕೆ ಹೊಡೆಯಲು ಪ್ರಾರಂಭಿಸಿದ ಬಳಿಕವೂ ಎಷ್ಟೋ ಹೊತ್ತು ಆಕೆ ಸಿಟ್ಟಿನಿಂದ, ಅಸಹಾಯಕತೆಯಿಂದ ಕುದಿಯುತ್ತಾ ಮಲಗಿದ್ದಳು: ತನ್ನನ್ನು ಹೆಣ್ಣಾಗಿ ಹುಟ್ಟಿಸಿದ ದೇವರನ್ನು ಹಳಿಯುತ್ತಾ ಮಲಗಿದಳು: ಕಣ್ಣೀರು ತಲೆದಿಂಬನ್ನು ತೋಯಿಸುತ್ತಿತ್ತು.

ಲೈಂಗಿಕ ವಿಷಯದಲ್ಲಿ ಗಂಡನನ್ನು ದೂರ ಇಟ್ಟರೆ ತನ್ನನ್ನು ದೂರ ಮಾಡುವನೇನೋ ಎಂಬ ಭಯದಿಂದ ಆಕೆ ಹಾಸಿಗೆಯಲ್ಲಿ ಆತನೊಡನೆ ಪಾಲ್ಗೊಳ್ಳುತ್ತಿದ್ದಳು. ಆಕೆಯ ದೇಹ ಸ್ಥಿತಿ ಹದಗೆಟ್ಟಾಗ ಅತ್ತೆಯು ಸೊಸೆಯ ಮೇಲೆ ರೇಗುವಳು. "ಇಂತಹ ರೋಗಿಯಾಗಿ, ನೀನು ಸ್ವಲ್ಪ ದೂರವಿರಬಾರದೇ? ಈ ವಿಷಯದಲ್ಲಿ ಹೆಂಗಸರು ಸ್ವಲ್ಪ ಜಾಗ್ರತೆಯಿಂದಿರಬೇಕು"[31] ಎಂದು ಗದರುವಳು. ಪುರುಷ ಪ್ರಧಾನದ ಅಧಿಕಾರದ ಚೌಕಟ್ಟಿಗೆ ಸಿಲುಕಿದ ಹೆಣ್ಣು ಆಕೆಯ ಬೇಕು ಬೇಡಗಳನ್ನು, ಆಸೆ ಆಕಾಂಕ್ಷೆಗಳನ್ನು ಬದಿಗಿಟ್ಟು ಗಂಡನ ಜೊತೆ ಲೈಂಗಿಕ ವಿಷಯವು ಬಂದಾಗ ಆತನೊಡನೆ ಸಹಕರಿಸುವುದು ಕಂಡುಬರುತ್ತದೆ. ಗಂಡಿನ ಅಧಿಕಾರದ ನೆಲೆಯಲ್ಲಿ ಇದೂ ಕೂಡ ಸೇರ್ಪಡೆಯಾಗುವುದು. ದಿನವೀಡಿ ಮನೆಯ ಕೆಲಸ ಮಾಡಿ ದಣಿದ ಹೆಣ್ಣಿನ ಮನಸ್ಥಿತಿಯನ್ನು ತಿಳಿಯದೆ ಬಲವಂತ ಪಡಿಸುವುದು ತಿಳಿಯುತ್ತದೆ. ಅಲ್ಲದೇ ಗಂಡಿನ ಆಸೆಗಳಿಗೆ ಹೆಣ್ಣು ಸಹಕರಿಸದೇ ಹೋದರೆ ಎಲ್ಲಿ ತನ್ನನ್ನು ತಿರಸ್ಕರಿಸುವನು ಎಂಬ ಮನೋಭಾವದಿಂದ ಆಕೆಯ ದೇಹಸ್ಥಿತಿಯು ಹದಗೆಟ್ಟರು ಸಹ ಹಾಸಿಗೆಯಲ್ಲಿ ಆತನೊಡನೆ ಪಾಲ್ಗೊಳ್ಳುವಳು. ಗಂಡ-ಹೆಂಡತಿಯ ಸಂಬಂಧವೆಂಬುದು ಸಾಮಾಜಿಕವಾಗಿ ಅನೋನ್ಯತೆಯನ್ನು ಪಡೆದಿದ್ದರೂ ಕೂಡ ಒಳಮನಸ್ಸುಗಳಲ್ಲಿ ಭಿನ್ನತೆಯಿರುವುದನ್ನು ಗುರುತಿಸಬಹುದಾಗಿದೆ.

ಸಂಪ್ರದಾಯದ ಚೌಕಟ್ಟಿಗೆ ಸಿಲುಕಿದ ನಾದಿರಾಳು ಮಾನಸಿಕವಾಗಿ, ದೈಹಿಕವಾಗಿ ದುರ್ಬಲಳಾಗುತ್ತಾ ಕಂಡುಬಂದರೂ ಸಹಿತ ಅತ್ತೆ ಕತೀಜಮ್ಮ ತನ್ನ ಮನೆಯ ಕೆಲಸ ಹಾಗೂ ಬೀಡಿ ಕಟ್ಟುವುದನ್ನು ಎಲ್ಲಿ ನಿಲ್ಲಿಸಿಬಿಡುವಳು ಎಂಬ ಆತಂಕವು ಆಕೆಯ ಮನಸ್ಸಿನಲ್ಲಿ ಇದ್ದುದರಿಂದ ಈ ರೀತಿಯ ಮಾತುಗಳಿಂದ ಸೊಸೆಯ ಮೇಲೆ ರೇಗುವ ಬಗೆಯನ್ನು ಗುರುತಿಸಬಹುದಾಗಿದೆ. ನಸೀಮಳಿಂದ ತನ್ನ ಆಸೆಯು ಈಡೇರದ

ಕಾರಣ ಇನ್ನೊಂದು ಮದುವೆಯಾಗಬೇಕೆಂದು ನಿಶ್ಚಯಿಸಿ ಮದುವೆ ಆದ ನಂತರ ಇಡೀ ಪುರುಷ ಸಮುದಾಯದ ಬಗೆಗೆ ಆಕೆಯ ಹೃದಯ ರೋಷದಿಂದ ಕುದಿಯುತ್ತದೆ. ಗಂಡು-ಹೆಣ್ಣಿನ ಸಂಬಂಧದ ಬಗೆಗೆ ಆಕೆಯ ಹೃದಯದಲ್ಲಿ ಜಿಗುಪ್ಸೆ ಉಂಟಾಗುವ ಬಗೆಯನ್ನು ಗುರುತಿಸಬಹುದಾಗಿದೆ.

'ವಜ್ರಗಳು' ಕಾದಂಬರಿಯಲ್ಲಿ ನಫೀಸಾಳು ಮದುವೆಯಾದಾಗ ಆಕೆಗೆ ಗಂಡು-ಹೆಣ್ಣಿನ ಸಂಬಂಧದ ಕುರಿತು ತಿಳುವಳಿಕೆಯೇ ಇಲ್ಲದಿದ್ದಾಗ ತನ್ನ ವಿವಾಹದ ಪ್ರಥಮ ರಾತ್ರಿಯಲ್ಲಿ ತನ್ನ ಗಂಡನೊಂದಿಗೆ ಹೇಗೆ ವರ್ತಿಸಬೇಕೆಂದು ತಿಳಿಯದೇ ಮಲಗಿದ್ದಾಗ, ಗುಡುಗಿನ ಶಬ್ದ ಕೇಳಿ ತನ್ನ ಗಂಡನನ್ನು ಬಿಗಿಯಾಗಿ ಅಪ್ಪಿಕೊಂಡು ಆತನ ಎದೆಯಲ್ಲಿ ಮುಖ ಹುದುಗಿಸಿದಳು. ಆಕೆಯ ರೂಪವನ್ನು ಕಂಡು ತಿರಸ್ಕಾರ ಭಾವನೆಯಿಂದ ಆದಾಗಲೇ ಎಚ್ಚರಗೊಂಡಿದ್ದ ಆತನ ಕೈ ಒರಟಾಗಿ ಆಕೆಯನ್ನು ದೂರ ತಳ್ಳಲು ಪ್ರಯತ್ನಿಸಿತು. ಆದರೆ ಆತನ ಕೈಗೆ ತಗುಲಿದ್ದು ಆಕೆಯ ದೇಹದ ಅತ್ಯಂತ ಮೃದುವಾದ ಭಾಗ![32] ಬೊಂಬಾಯಿಯಲ್ಲಿದ್ದ ಆತನಿಗೆ ಹೆಣ್ಣಿನ ದೇಹರಚನೆಯೇನೂ ಅಪರಿಚಿತವಾಗಿರಲಿಲ್ಲ. ಈಗ ಆಕೆಯ ಎದೆಗೆ ಆತನ ಕೈ ತಗುಲಿದಾಗ ಕ್ಷಣಕಾಲ ಆತನ ಕೈ ಅಲ್ಲೆ ತಡೆಯಿತು. ಹೊರಗಿನ ಗಾಳಿ, ಮಳೆ, ಗುಡುಗು, ಮಿಂಚು, ಕೋಣೆಯೊಳಗಿನ ಕಡುಕಪ್ಪು ಕತ್ತಲೆ, ತಣ್ಣನೆಯ ವಾತಾವರಣ, ಎಲ್ಲಕ್ಕಿಂತ ಹೆಚ್ಚಾಗಿ ನಫೀಸಾಳು ಮುಡಿದ ಮಲ್ಲಿಗೆಯ ಪರಿಮಳವು ಆತನನ್ನು ಉನ್ಮತ್ತನನ್ನಾಗಿಸಿತು. ಬದ್ರುದ್ದೀನ್‌ಗೆ ನಫೀಸಾಳು ತನ್ನನ್ನು ಪ್ರೀತಿಯಿಂದ ಅರ್ಪಿಸಿಕೊಂಡಳು. ಈ ಲೈಂಗಿಕ ಕ್ರಿಯೆಯಲ್ಲಿ ಒಪ್ಪಿಗೆಯನ್ನು ಸೂಚಿಸಿದ್ದು ಒಂದು ಆಕಸ್ಮಿಕವೆಂಬಂತೆ ಕಂಡು ಬರುವುದು.

ಬದ್ರುದ್ದೀನನು ಎಂದಿನಂತೆ ಕೆಲಸ ಮುಗಿಸಿ ಮನೆಗೆ ರಾತ್ರಿಯ ಸಮಯದಲ್ಲಿ ಬಂದಾಗ ದೀಪವಾರಿಸಿ ಆಕೆಯ ಬಳಿಯಲ್ಲಿ ಮಲಗಿ ಆಕೆಯನ್ನು ಬಿಗಿಯಾಗಿ ಅಪ್ಪಿಕೊಂಡನು. ಮೌನವಾಗಿ ತನ್ನನ್ನೊಪ್ಪಿಸಿ ಕೊಳ್ಳಲು ಸಿದ್ಧಳಿಲ್ಲದ ನಫೀಸಾ ಪ್ರತಿಭಟಿಸಿದಾಗ ಅದನ್ನು ಲೆಕ್ಕಿಸದೇ ಸುಮ್ಮನೆ ಮಲಗು ಎಂದು ಗದರಿಸಿದನು. ತನಗೆ ಸೇರಿದ್ದ ಹೆಂಡತಿಯ ಮನಸ್ಥಿತಿಯ ತಳಮಳವನ್ನು ತಿಳಿಯದಾದನು. ಹಗಲಿನಲ್ಲಿ ಆಕೆಯನ್ನು ಎಷ್ಟೇ ದೂರವಿಟ್ಟರೂ ರಾತ್ರಿಯಲ್ಲಿ ಆತನ ಹಸಿವು ಜಾಗೃತವಾಗುತ್ತಿತ್ತು. ಒಂದು ದಿನ ಪ್ರಕೃತಿಯ ಮೋಸಕ್ಕೆ ಬಲಿಯಾದ ಆತನು ಈಗ ನರಮಾಂಸದ ರುಚಿಕಂಡ ಹುಲಿಯಂತಾಗಿದ್ದನು. ಈಗ ಪ್ರತಿದಿನವೂ ಆಕೆಯನ್ನು ತನ್ನ ಕಾಮತೃಪ್ತಿಗಾಗಿ ಉಪಯೋಗಿಸಿಕೊಳ್ಳುತ್ತಿದ್ದನು. ಹೇಗೂ ತನಗೆ ಹಲಾಲ್ (ಅನುಮತಿಸಲ್ಪಟ್ಟಿದ್ದು) ಆದ ದೇಹ. ಇಲ್ಲಿರುವಷ್ಟು ದಿನ ಉಪಯೋಗಿಸಿಕೊಂಡರಾಯಿತು ಎಂಬ ತೀರ್ಮಾನಕ್ಕೆ ಆತ ಬಂದಿದ್ದನು. ತನ್ನ ಕಾಮತೃಷೆಗಾಗಿಯೇ ಇರುವ ಒಂದು ಯಂತ್ರ ಆಕೆಯೆಂದೇ ತಿಳಿದಂತಿತ್ತು. ಆತನ ನಡವಳಿಕೆ, ಆಕೆಯ ಬೇಕು ಬೇಡಗಳೊಂದನ್ನು ಗಮನಿಸದೇ ತನಗೆ ತೃಪ್ತಿಯಾದೊಡನೆ ಪಕ್ಕಕ್ಕೆ ಹೊರಳಿ ನಿದ್ದೆ ಮಾಡುತ್ತಿದ್ದನು.[33]

ಈ ರೀತಿಯ ಲೈಂಗಿಕ ರಾಜಕಾರಣವು ಹೆಣ್ಣಿನ ಒಪ್ಪಿಗೆಯನ್ನು ಪಡೆದು ಅಥವಾ ಪಡೆಯದೆಯೇ ಗಂಡು ತನಗೆ ಬೇಕಾದ ಹಾಗೆ ತನ್ನ ಕಾಮದ ಆಸೆಗಾಗಿ ಆಕೆಯನ್ನು ಉಪಯೋಗಿಸುತ್ತಿದ್ದದ್ದು ಕಂಡುಬರುತ್ತದೆ. ತನಗೆ ಸಂಬಂಧಿಸಿದ ಹೆಣ್ಣಿನ ಜೊತೆಗೆ ನಲ್ಮೆಯಿಂದ ಮಾತನಾಡದೆ ಆಕೆಯ ಮನಸ್ಸನ್ನು ಮೊದಲು ತನ್ನ ಕಡೆಗೆ ಸೆಳೆದುಕೊಳ್ಳದೇ ಏಕಾಏಕಿ ಆಕೆಯ ದೇಹದ ಮೇಲೆ ಎರುಗುವುದು ಸಾರಾ ಅವರ ಕಾದಂಬರಿಗಳಲ್ಲಿ ಕಂಡುಬರುತ್ತದೆ.

### 3. ಅಧಿಕಾರದ ಪ್ರತಿಷ್ಠಾಪನೆ:

ಗಂಡು ಕುಟುಂಬದ ವಲಯದಲ್ಲಿ ಮತ್ತು ಸಮಾಜದಲ್ಲಿ ಪ್ರತಿಯೊಂದು ವಿಷಯಕ್ಕೂ ತಾನು ಹೇಳಿದ ಹಾಗೆ ನಡೆಯಬೇಕೆಂಬ ಅಧಿಪತ್ಯವನ್ನು ನಡೆಸುವುದು ಕಂಡುಬರುತ್ತದೆ. ಗಂಡು ತನ್ನ ಅಧಿಕಾರವನ್ನು ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ನೆಲೆಯಿಂದ ಹೆಣ್ಣಿನ ಮೇಲೆ ನಿರ್ಬಂಧನೆಗಳನ್ನು ಹೇರುತ್ತಾ ಆಕೆಯನ್ನು ಶೋಷಣೆಗೆ ಗುರಿ ಮಾಡುತ್ತಾ ದಬ್ಬಾಳಿಕೆಯಿಂದ ಅಧಿಕಾರವನ್ನು ಸ್ಥಾಪಿಸುವರು. ಎಲ್ಲಾ ಸಮುದಾಯದಲ್ಲಿಯೂ ಇರುವಂತೆ ಮುಸ್ಲಿಂ ಸಮುದಾಯದಲ್ಲಿಯೂ ಸಹ ಗಂಡಿನ ಯಾಜಮಾನಿಕೆಯ ಅಧಿಕಾರವು ಕಾಸರಗೋಡಿನ ತಪಲಿನಲ್ಲಿ ಬದುಕನ್ನು ನಡೆಸುತ್ತಿರುವಂತಹ ಮಧ್ಯಮ ವರ್ಗದ ಮಹಿಳೆಯರ ಮೇಲಾಗುತ್ತಿರುವುದನ್ನು ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳ ಮೂಲಕ ತಿಳಿಯಬಹುದಾಗಿದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಮಹಮ್ಮದ್ ಖಾನ್ ತನ್ನ ಅಳಿಯ ರಶೀದ್ ಬಳಿ ಹೋಗಿ ಹಣವನ್ನು ನಯವಾಗಿ ಕೇಳದೇ ಒರಟುತನದಿಂದ "ನೀನು ಹೀಗಂದರೆ ಹೇಗೆ ರಶೀದ್? ಈಗ ನೀನು ಹೇಗಾದರೂ ಮಾಡಿ ಹಣ ಒದಗಿಸಲೇ ಬೇಕು"[34] ಎಂದು ಕೊಂಚ ಗಡುಸಾಗಿಯೇ ಅಧಿಕಾರದ ನೆಲೆಯಿಂದ ಕೇಳುವುದು ಕಂಡುಬರುತ್ತದೆ. ರಶೀದ್ ಬಂದು ತನ್ನ ಕಾಲಿಗೆ ಬಿದ್ದು ತನ್ನೊಡನೆ ಕ್ಷಮೆ ಕೇಳಲಿ ಎಂಬುದು ಅವರ ಮನದಾಳದ ಆಶಯವಾಗಿತ್ತು. ಆದರೆ ಹಾಗೆಂದು ಅವರು ಬಾಯಿಬಿಟ್ಟು ಯಾರೊಡನೆಯೂ ಅಂದಿರಲಿಲ್ಲ. ತನ್ನ ಮುಂಗೋಪ ಮತ್ತು ಸರ್ವಾಧಿಕಾರಿ ಮನೋಭಾವ ತನ್ನನ್ನು ಇತರರಿಂದ ಬೇರ್ಪಡಿಸಿ ಬಹಳ ದೂರದಲ್ಲಿ ನಿಲ್ಲಿಸಿತ್ತು ಮತ್ತು ಇದರಿಂದಾಗಿ ರಶೀದ್ ಕೂಡ ತನ್ನನ್ನು ಸಮೀಪಿಸಲು ಪ್ರಯತ್ನಿಸಲಾರ ಎಂಬುದನ್ನು ಅವರು ಮನಗಾಣುವಂತೆಯೇ ಇರಲಿಲ್ಲ. ತಮ್ಮ ತಪ್ಪನ್ನಂತೂ ಅವರು ಒಪ್ಪಿಕೊಳ್ಳುವ ಸಾಧ್ಯತೆಯೇ ಇರಲಿಲ್ಲ: ಆದ್ದರಿಂದಲೇ ಅವರು ತಮ್ಮ ವ್ಯಥೆಯನ್ನು ಅಡಗಿಸಿಕೊಂಡು ಅದೊಂದು ದೊಡ್ಡ ವಿಷಯವಲ್ಲವೆಂಬಂತೆ ಜೊರಾಗಿ ಇದದ್ದು ಕಂಡುಬರುವುದು.

ಮಹಮ್ಮದ್ ಖಾನ್ ತನ್ನ ಅಳಿಯನ ಮೇಲೆ ಕೋಪದಿಂದ ಆತನ ಎದುರು ತನ್ನ ಅಧಿಕಾರದ ಪ್ರತಿಷ್ಠೆಯ ನಿಲುವಿನಿಂದ ಮಗಳು ನಾದಿರಾಳನ್ನು ತನ್ನ ಮನೆಗೆ ಕರೆದುಕೊಂಡು ರಶೀದ್‌ನಿಂದ ತಲಾಖ್ ಪಡೆದು ನಂತರ ಈಗ ಹಗಲಿರುಳೂ ಚಿಂತಿಸ ತೊಡಗಿದರು. ಮಹಮ್ಮದ್ ಖಾನ್‌ರ ಸ್ವಭಾವ ತೀರ ಒರಟು. ಮುಂಗೋಪಿಯೂ ಕೂಡಾ. ತನ್ನ ಮಾತೇ ನಡೆಯಬೇಕೆಂಬ ಹಟ. ಒಂದು ರೀತಿಯ ಸರ್ವಾಧಿಕಾರೀ ಮನೋಭಾವ. ಹೀಗಾಗಿ ಗೆಳೆಯರ ಸಂಖ್ಯೆಯೂ ಕಡಿಮೆ ಇರುವರು. ತನ್ನ ಅಧಿಕಾರವನ್ನು ಸ್ಥಾಪಿಸಲು ಹೋಗಿ ತಮ್ಮ ಕುಟುಂಬದವರ ಮೇಲಾಗುತ್ತಿರುವ ತೊಂದರೆಗಳನ್ನು ಗಮನಿಸದೆ ಹಾತುರದಿಂದ ತೀರ್ಮಾನವನ್ನು ಕೈಗೊಂಡು, ನಂತರ ಮನ ತಿಳಿಯಾಗಿ ನಡೆದ ಪೂರ್ವ ಸಂಗತಿಗಳನ್ನು ಮೆಲುಕು ಹಾಕಿ ಚಿಂತಿಸಿದಾಗ "ಮಿಂಚಿ ಹೋದ ಕಾಲಕ್ಕೆ ಚಿಂತಿಸಿ ಫಲವೇನು"[35] ಎಂಬಂತೆ ಹಾತುರದಿಂದ ತೆಗಸೆದುಕೊಂಡ ತೀರ್ಮಾನದಿಂದ ಆ ತೊಂದರೆಗಳಿಗೆ ಸರಿಯಾದ ಪರಿಹಾರವನ್ನು ಕಂಡು ಹಿಡಿದುಕೊಳ್ಳಲಾಗದೆ ದುರಂತದ ಕಡೆಗೆ ಬದುಕು ಸಾಗುವುದು ಕಂಡುಬರುತ್ತದೆ.

'ಸಹನಾ' ಕಾದಂಬರಿಯಲ್ಲಿ ನಸೀಮ ಮದುವೆ ಆಗಿ ತನ್ನ ಗಂಡನ ಮನೆಗೆ ಹೋದಾಗ ಅತ್ತೆ ಕತೀಜಮ್ಮ ತನ್ನ ಅತ್ತೆಯ ಅಧಿಕಾರದ ದರ್ಪವನ್ನು ತೋರಿಸುವಳು. ಒಮ್ಮೆ ನಸೀಮ ತಾಯಿ ಒಂದು ಮಗಳನ್ನು ಮನೆಗಸೆ ಕಳುಹಿಸಿ ಎಂದಾಗ 'ಇಲ್ಲ ಇಂದು ಆಗುವುದಿಲ್ಲ ತನ್ನ ಮಗನನ್ನು ಕೇಳಿ ಎಂದಾದರೊಮ್ಮೆ ಕಳುಹಿಸುವೆನು'[36] ಎಂದು ಹೇಳಿದ್ದನ್ನು ಏನು ತಿಳಿಯಾದ ನಸೀಮ ಗಂಡನಿಗೆ ನಡೆದ ಸಂಗತಿಯೆಲ್ಲವನ್ನು ತಿಳಿಸುವಳು. ಪಾಷಾ ತನ್ನ ತಾಯಿಯನ್ನು ಕೇಳಿದಾಗ ಅತ್ತೆ ಸೊಸೆಯ ಹೌಹಾರುವಳು. ಏನೇ ಈಗಲೇ ನನ್ನ ಮೇಲೆ ಗಂಡನ ಬಳಿಯಲ್ಲಿ ಚಾಡಿ ಹೇಳುವೆಯಾ ಎಂದು. ಇದು ಒಂದು ಕಡೆ ಗಂಡು ಹೆಣ್ಣಿನ ಮೇಲೆ ಅಧಿಕಾರವನ್ನು ಸ್ಥಾಪಿಸಿದರೆ, ಮತ್ತೊಂದೆಡೆ ಹೆಣ್ಣು ಹೆಣ್ಣಿನ ಮೇಲೆ ಅಧಿಕಾರದ ಸ್ಥಾಪನೆಯನ್ನು ಮಾಡುವುದನ್ನು ಗುರುತಿಸಬಹುದಾಗಿದೆ.

ಒಟ್ಟಾರೆ ಅಧಿಕಾರ ಪ್ರತಿಷ್ಠಾಪನೆ ಗಂಡಿನ ಮನೋಧರ್ಮವನ್ನು ತಿಳಿಸುವಂತಹುದು ಆಗಿರುವುದು. ಹೇಗೆ ಭಿನ್ನ ನೆಲೆಗಳಿಂದ ಹೆಣ್ಣಿನ ಅಧಿಕಾರ ನಡೆಸುತ್ತಾ ತನ್ನ ಮಾತೇ ವೇದವಾಕ್ಯದಂತೆ ಇರಬೇಕೆಂದು ಕುಟುಂಬ ಮತ್ತು ಸಮಾಜದಲ್ಲಿಯೂ ಸಹ ಅಧಿಪತ್ಯವನ್ನು ಸ್ಥಾಪಿಸಿರುವುದು ಎಂಬುದಾಗಿ ಗುರುತಿಸಬಹುದಾಗಿದೆ.

### 4. ಹೆಣ್ಣಿನ ಚಲನ ವಲನಗಳ ಮೇಲಿನ ನಿಯಂತ್ರಣ:

ಹೆಣ್ಣಿನ ದೇಹದ ಸಂರಚನೆಯನ್ನೇ ನೆಪವಾಗಿಟ್ಟುಕೊಂಡು ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ ಹೆಣ್ಣಿನ ಮೇಲೆ ತನ್ನ ಅಧಿಪತ್ಯವನ್ನು ಸಾಧಿಸಿದೆ. ಅವಳನ್ನು ಹೊರಗೆ ಹೋಗದಂತೆ ನಿರ್ಬಂಧಿಸುತ್ತಾರೆ. ತನ್ನ ಕುಟುಂಬದ ಮಹಿಳೆಯರ ಮೇಲೆ ದರ್ಪ ತೋರುತ್ತಾ ಸಮಾಜದಲ್ಲಿ ತನ್ನ ಅಧಿಕಾರವನ್ನು ಸ್ಥಾಪನೆ ಮಾಡಲು ಪ್ರಯತ್ನಿಸುತ್ತಾನೆ. ಹೆಣ್ಣಿನ ನಡೆ, ನುಡಿ, ಉಡುಗೆ, ತೊಡುಗೆ, ಊಟ, ಆಕೆ ಎಲ್ಲಿ ಹೋಗಬೇಕು. ಯಾರೊಂದಿಗೆ ಮಾತಾಡಬೇಕು. ಯಾರೊಂದಿಗೆ ನಗಬೇಕೆಂದು ಕೂಡ ಪುರುಷರೇ ನಿರ್ಧರಿಸುತ್ತಾರೆ. ಅವಳ ಚಿಕ್ಕ ಪುಟ್ಟ ಚಲನೆಗಳನ್ನು ನಿಯಂತ್ರಿಸುತ್ತಾರೆ. ಸಮಾಜದಲ್ಲಿ ಹುಟ್ಟಿದ ಮಗು ಬೆಳೆಯುತ್ತ ಹೆಣ್ಣುತನ ಅಥವಾ ಗಂಡುತನವನ್ನು ರೂಢಿಸಿಕೊಳ್ಳುತ್ತದೆ. ಗಡಸುತನ, ಬಲಿಷ್ಟತೆ, ಸಾಹಸ. ಧೈರ್ಯ, ಬುದ್ಧಿವಂತಿಕೆ, ಆಕ್ರಮಣಶೀಲತೆ, ಮುಂದಾಳತ್ವ, ಒರಟುತನ, ಕ್ರಿಯಾಶೀಲತೆಗಳು ಗಂಡು ಗುಣಗಳೆಂದು ಪರಿಗಣಿಸಿದೆ. ಆ ಕಾರಣಕ್ಕೇನೆ ಪುರುಷ ಮೇಲರಿಮೆ, ಆಕ್ರಮಣಶೀಲತೆಯಿಂದ ಅವಳನ್ನು ನಿಯಂತ್ರಿಸುತ್ತಾನೆ. ಭಾರತೀಯ ಕುಟುಂಬ ವ್ಯವಸ್ಥೆಯಲ್ಲಿ ಮನೆಯ ಹಿರಿಯರು ಕುಟುಂಬದ ಎಲ್ಲ ವ್ಯಕ್ತಿಗಳ ಚಲನ ವಲನಗಳನ್ನು ನಿಯಂತ್ರಿಸುತ್ತಾರೆ. ಮನೆಯ ಪ್ರತಿಯೊಂದು ಚಟುವಟಿಕೆಯೂ ಅವರ ಗಮನಕ್ಕೆ ಬಾರದಂತೆ ನಡೆಯುವುದೇ ಇಲ್ಲ. ಗಂಡಸು ಹೆಣ್ಣಿಗೆ ಮನೆಯ ಹೊಸ್ತಿಲು ದಾಟದಂತೆ ತಡೆಯುತ್ತಾನೆ.

ಸಾರಾರವರ ಕಾದಂಬರಿಗಳಲ್ಲಿ ಕೇಂದ್ರ ವಸ್ತು ಹೆಣ್ಣು. ಹೆಣ್ಣಿನ ಮೇಲೆ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ ನಡೆಯುವ ದಬ್ಬಾಳಿಕೆ, ಶೋಷಣೆ, ನಿರ್ಬಂಧಗಳ ಚೌಕಟ್ಟಿನಲ್ಲಿ ಸಿಲುಕಿಸಿ ಆಕೆಯ ಪ್ರತಿಯೊಂದು ಚಲನವಲನಗಳ ಮೇಲೂ ನಿಯಂತ್ರಣವನ್ನು ಹೇರುವುದು ಕಂಡುಬರುತ್ತದೆ.

"ಮಹಿಳೆ ಮಹಿಳೆಯಾಗಿ ಹುಟ್ಟುವುದಿಲ್ಲ. ಸಮಾಜ ಅವಳನ್ನು ಮಹಿಳೆಯಾಗಿ ರೂಪಿಸುತ್ತದೆ. ಮಹಿಳೆ ರೂಪಿಸಲ್ಪಟ್ಟವಳು"[37] ಎನ್ನುವುದು ಬೋವಾ ಅವರ ಚಿಂತನೆಯಾಗಿದೆ. ಸ್ತ್ರೀವಾದಿ ಚಿಂತಕಿ ಸಿಮೋನ್ ದಿ ಬೋವಾ ಅವರು ಜಾಗತಿಕ ಚಿಂತನೆಯಲ್ಲಿ ಅನ್ವಯ ಮಾದರಿಗಳನ್ನು ಬಳಸುವರು. ಭಾರತದಂತಹ ದೇಶದಲ್ಲಿ ಗಂಡು-ಹೆಣ್ಣು ಎಂಬ ಎರಡು ಜೈವಿಕ ಭಿನ್ನತೆಗಳು ಮಾತ್ರ ಇರುವುದಲ್ಲದೆ, ಧರ್ಮದ ನೆಲೆಯಲ್ಲಿ, ಜಾತಿಯ ನೆಲೆಯಲ್ಲಿ, ವರ್ಗದ ನೆಲೆಯಲ್ಲಿ, ಪ್ರಾದೇಶಿಕ ನೆಲೆಯಲ್ಲಿ ಭಿನ್ನತೆಗಳು ಇರುವಂತೆ ಹೆಣ್ಣಿನಲ್ಲಿಯೂ ಭಿನ್ನತೆಗಳಿರುವುದು ಕಂಡುಬರುತ್ತದೆ. ಭಾರತದಲ್ಲಿ ಗಂಡು-ಹೆಣ್ಣು ಭಿನ್ನತೆಗಳನ್ನು ಇಟ್ಟುಕೊಂಡು ಹೆಣ್ಣನ್ನು ಅರ್ಥೈಸಲಾಗುವುದಿಲ್ಲ. ಇಲ್ಲಿ ಧರ್ಮ, ಜಾತಿ, ವರ್ಗದ ಚೌಕಟ್ಟಿನೊಳಗಿನ 'ನಿಯಂತ್ರಕ' ನೆಲೆಗಳು ಆಯಾ ಮಹಿಳೆಯನ್ನು ಆಯಾ ಚೌಕಟ್ಟಿಗೆ ತಕ್ಕಂತೆ ರೂಪಿಸುವುದನ್ನು ಗಮನಿಸಬಹುದಾಗಿದೆ.

ನಿಯಂತ್ರಕ ನೆಲೆಯ ಚೌಕಟ್ಟು ಮುಸ್ಲಿಂ ಸಮುದಾಯದ ಹೆಣ್ಣಿಗೂ ಅನ್ವಯವಾಗುವುದು. ಸಾರಾರವರ ಕಾದಂಬರಿಗಳಲ್ಲಿ ಬರುವ ಸ್ತ್ರೀ ಪಾತ್ರಗಳಾದ ಫಾತಿಮ್ಮ, ನಾದಿರಾ, ಜಮೀಲಾ, ನಸೀಮ, ನಫೀಸಾರ ಬದುಕಿನಲ್ಲಿ ನಿಯಂತ್ರಣವು ಮಾನಸಿಕವಾಗಿ, ದೈಹಿಕವಾಗಿ ಧರ್ಮದ ನೆಲೆಯಿಂದ, ಯಾಜಮಾನ್ಯದ ನೆಲೆಯಿಂದ ಪುರುಷ ಪ್ರಧಾನ ಸಮಾಜವು ಹೆಣ್ಣಿನ ಅಭಿವ್ಯಕ್ತಿ, ಕ್ರಿಯಾಶೀಲತೆಯನ್ನು ವ್ಯಕ್ತ ಪಡಿಸುವ ಸಂದರ್ಭದಲೆಲ್ಲಾ 'ನೀನು ಹೆಣ್ಣು, ಪುರುಷರಂತೆ ನಡೆದುಕೊಳ್ಳಬಾರದು. ಹೀಗೆ ನಡೆದುಕೊಳ್ಳಬೇಕು' ಎಂಬ ನಿಯಮಗಳಿಂದ ನಿಯಂತ್ರಿಸಲಾಗಿದೆ.

ಸಾರಾರವರು ತಮ್ಮ ಕಾದಂಬರಿಗಳಲ್ಲಿ ಬರುವ ಹೆಣ್ಣಿನ ಪಾತ್ರಗಳಲ್ಲಿ ಸಂಪ್ರದಾಯದ ನಿಯಮಗಳನ್ನು ಮೀರುವ ಪ್ರಯತ್ನವು ಕಂಡುಬರುತ್ತದೆ. ಹೆಣ್ಣಾಗಿ ಹುಟ್ಟಿದ ಮೇಲೆ ಆಕೆ ಯಾವ ತಪ್ಪು ಮಾಡದಿದ್ದರೂ ಸಹ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ. ಆದುದರಿಂದ ಕತ್ತಲೆಯಿಂದ ಬೆಳಕಿನೆಡೆಗೆ ಚಲಿಸುವಂತೆ ಹೆಣ್ಣಿನ ಪಾತ್ರಗಳು ತಮ್ಮ ಬದುಕಿನ ಸಂಕಷ್ಟಗಳಿಗೆ ಉತ್ತರವನ್ನು ಸ್ವತಃ ಕಂಡುಬರುತ್ತವೆ.

ಸಾರಾರವರು ತಮ್ಮ ಸಮುದಾಯದ ಹೆಣ್ಣಿನ ಮನಸ್ಥಿತಿಗಳ ಮೇಲೆ ನಡೆಯುವ ಶೋಷಣೆ, ನಿರ್ಬಂಧದ ವಿಚಾರಗಳನ್ನು ತಮ್ಮ ಕಾದಂಬರಿಗಳಲ್ಲಿ ಚಿತ್ರಿಸಿರುವುದನ್ನು ಗಮನಿಸಬಹುದಾಗಿದೆ. ಉದಾ: "ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು"[38] ಎಂಬ ಭಾಗದಲ್ಲಿ ಹೆಣ್ಣು ಪುರುಷರಂತೆ ಕಲಾ ಕ್ಷೇತ್ರದಲ್ಲಿ ತೊಡಗಲು ಆಸಕ್ತಿಯಿದ್ದರೂ ಕೂಡ ಆಕೆಗೆ ಸಂಪ್ರದಾಯದ ನಿಯಮಗಳನ್ನು ಹೇರುತ್ತ ಆಕೆಯನ್ನು ಗಂಡಿನ ನಿಯಂತ್ರಣಕ್ಕೆ ಒಳಪಡಿಸುವುದನ್ನು ಗುರುತಿಸಬಹುದಾಗಿದೆ. ಈ ನಿಯಂತ್ರಣ ಸಾಮಾಜಿಕ ಚಲನೆಗನುಗುಣವಾಗಿ ಬದಲಾಗುತ್ತ ಇರುತ್ತದೆ. ಸಾಮಾಜಿಕ ಜೀವನದಲ್ಲಿ 'ಮುಸ್ಲಿಂ' ಮಹಿಳೆ ಗುರುತಿಸಿಕೊಳ್ಳುವ ಹಲವು ನಿಯಂತ್ರಣಗಳಲ್ಲಿ ಹೆಣ್ಣಿನ ಚಲನ ವಲನಗಳ ಮೇಲಿನ ನಿಯಂತ್ರಣವು ಒಂದು. ಈ ನಿಯಂತ್ರಣದ ವಿವಿಧ ಮಾದರಿಗಳನ್ನು ಮುಸ್ಲಿಂ ಬರಹಗಳಲ್ಲಿ ಗುರುತಿಸಬಹುದಾಗಿದೆ.

**ಉದಾಹರಣೆಗೆ:** ಬೊಳುವಾರರ 'ಆಕಾಶಕ್ಕೆ ನೀಲಿಪರದೆ'ಯಲ್ಲಿ ಸಾಮಾಜಿಕ ಆವರಣ ಮೀರುವ ಮುಕುಂದಣ್ಣ, ಕುಂಞ ಪಾತುಮ್ಮಳ ಸಾವಿನ ನಂತರ ಅವಳ ಮಗಳು ಮುಬೀನಾ (ಬೇಬಿ)ಳನ್ನು ಸಾಕುತ್ತಾನೆ.ಕಡೆಗೇ ತಾನೇ ಎತ್ತಿ ಆಡಿಸಿದ ಮುಬೀನಾಳನ್ನು ಮದುವೆಯಾಗುತ್ತಾನೆ. ಸಾಮಾಜಿಕವಾಗಿ ಜನ್ಮದ ಕಾರಣದಿಂದ ಜಾತಿಗಳ ಪರಿಧಿಯನ್ನು ಅರಿವಾಗದಂತೆ ಮೀರುತ್ತಾನೆ. ತಂದೆಯ ಸ್ಥಾನದಲ್ಲಿ

ಪೋಷಿಸುವ ಅಣ್ಣನಂತೆ ಗದರಿಸುವ ಮುಕುಂದಣ್ಣ ಮದುವೆಯಾಗಿಯೂ ಎಂದಿಗೂ ಸಜ್ಜನಿಕೆ ಮೀರಿದವನಲ್ಲ. "ಒಂದು ವಾರದಿಂದ ನಿನಗೆ ಹೇಳಬೇಕು ಅಂತ ಯೋಚನೆ ಮಾಡುತ್ತಾ ಇದ್ದೇನೆ. ನೀನು ಮಾಳಿಗೆಯ ಕಿಟಕಿಯ ಹತ್ತಿರ ಇಡೀ ಊರು ಕಾಣುವಂತೆ ಪ್ರದರ್ಶನಕ್ಕೆ ಕೂತುಕೊಳ್ಳುವುದು ನನಗೆ ಸರಿ ಕಾಣಿಸುವುದಿಲ್ಲ. ನೀನು ಸ್ವಲ್ಪ ಮರ್ಯಾದೆಯಾಗಿ ಬದುಕುವುದನ್ನು ಕಲಿಯಬೇಕು. ನಿಮ್ಮ ಜಾತಿಯವರು ನಿಮಗೆಲ್ಲ ಕಪ್ಪು ಬಟ್ಟೆ ಸುತ್ತಿ ಮೂಲೆಯಲ್ಲಿ ಬಚ್ಚಿಡುವುದು ಸುಮ್ಮನೆ ಏನೂ ಅಲ್ಲ. ಸಸಾರ ಕೊಟ್ಟರೆ ನೀವು ಮನೆಯ ಮಾಡು ಹತ್ತಿ ಬಟ್ಟೆ ಬಿಚ್ಚಿ ಕುಣಿಲಿಕ್ಕೂ ಹಿಂದೆ ಮುಂದೆ ನೋಡುವ ಜಾತಿಯಲ್ಲ."[39] ಎಂದಾಗ ಬೇಬಿಗೆ ಮುಕುಂದಣ್ಣ ಕುರುಪಿಯಾಗಿ ಕಂಡಿದ್ದ. ಅವನನ್ನು ನೋಡಲೂ ಅವಳಿಗೆ ಹೇಸಿಕೆಯಾಗುತ್ತದೆ. ಮುಕುಂದಣ್ಣ ಬೇಬಿಗೆ ಆಕಾಶವೂ ಕಾಣದಂತೆ ನೀಲಿ ಪರದೆಯಿಂದ ಮುಚ್ಚುತ್ತಾನೆ. ಬೇಬಿಗೆ ಮೈ ತುಂಬ ಮುಳ್ಳು ನೆಟ್ಟ ಯಾತನೆಯಾಗುತ್ತದೆ. ಹೆಣ್ಣನ್ನು ಮುಚ್ಚಿಡುವ, ಅಪಮಾನಿಸುವ, ಕೀಳರಿಮೆ ಮೂಡಿಸುವ ಅಸಹ್ಯಕರವಾದ ಈ ಮಾತುಗಳು ಬೇಬಿಗೆ ನೋವನ್ನುಂಟು ಮಾಡುತ್ತದೆ. ಈ ರೀತಿಯಾಗಿ ಹೆಣ್ಣಿನ ಚಲನವಲನಗಳ ಮೇಲೆ ನಿಯಂತ್ರಣ ಮಾಡುವ ವಿವಿಧ ವಲಯದ ಬಗೆಯು ವ್ಯಕ್ತವಾಗುವುದು.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಫಾತಿಮ್ಮ ಮದುವೆ ಆಗಿ ಖಾನ್‌ರ ಮನೆಗೆ ಹೋದಾಗ ತಾನು ಹೇಳಿದಂತೆ ಕೇಳಲಿಲ್ಲ ಎಂದು ಕೋಪಬಂದು ಕೆಲವು ದಿನಗಳ ಬಳಿಕ ಆತನ ಮನೆಯಲ್ಲಿ ಫಾತಿಮ್ಮಳು ಹೆಜ್ಜೆಯಿಟ್ಟಾಗ ಆಕೆಗೆ ಪ್ರಥಮವಾಗಿ ಕಣ್ಣಿಗೆ ಬಿದ್ದದ್ದು ಕೋಣೆಯ ಮೂಲೆಯಲ್ಲಿಟ್ಟಾಗ ಬಿದಿರಿನ ಬೆತ್ತ! ಆ ರಾತ್ರಿಯೇ ಮಹಮ್ಮದ್ ಖಾನ್ ಬೆತ್ತವನ್ನು ತೋರಿಸುತ್ತಾ ಫಾತಿಮ್ಮಳೊಡನೆ,"ಇದು ಏಕೆಂದು ಗೊತ್ತಿದೆಯಲ್ಲಾ? ನಾನು ಹೇಳಿದಂತೆ ಕೇಳದಿದ್ದರೆ ಇದು ನಿನ್ನೊಡನೆ ಮಾತನಾಡುತ್ತದೆ"[40] ಎಂದು ಒರಟು ಧ್ವನಿಯನ್ನು ಇನ್ನಷ್ಟು ಒರಟಾಗಿಸಿ ನುಡಿದಿದ್ದರು.

ಈ ರೀತಿಯಾಗಿ ಫಾತಿಮ್ಮ ಬದುಕಿನ ಚಲನ ವಲನಗಳ ಮೇಲೆ ನಿಯಂತ್ರಣವನ್ನು ಹೇರುತ್ತಿದ್ದರು. ಆಕೆಯೊಡನೆ ಬೆತ್ತ ಆಗಾಗ ಮಾತನಾಡುತ್ತಲೂ ಇತ್ತು. ಎಂದಾರರೊಮ್ಮೆ ತನ್ನ ತವರು ಮನೆಗೂ ಅಪರೂಪಕ್ಕೊಮ್ಮೆ ಸಮೀಪ ಬಂಧುಗಳ ಮನೆಯ ಯಾವುದಾದರೊಂದು ಸಮಾರಂಭಕ್ಕೂ ಹೋಗಿ ಬರುವುದು ಕೊಂಚ ತಡವಾದರೂ ಆ ಬೆತ್ತ ಆಕೆಯೊಡನೆ ಸಂಭಾಷಿಸುತ್ತಿತ್ತು.

ಫಾತಿಮ್ಮ ಆಕೆಯ ಅಕ್ಕನ ಮಗಳ ಮದುವೆಗೆ ಹೋದಾಕೆಯನ್ನು ಅಕ್ಕ ಒತ್ತಾಯದಿಂದ ನಿಲ್ಲಿಸಿಕೊಂಡಿದ್ದಳು. "ಈ ದಿನ ಇರು. ನಾಳೆ ಮದುಮಗಳ ಜೊತೆಯಲ್ಲಿ ಅವಳ ಗಂಡನ ಮನೆಗೆ ಹೋಗಿ ಬಾ. ಚಿಕ್ಕಮ್ಮನಾದ ನೀನು ಹೋಗದೆ ಇನ್ಯಾರು ಹೋಗಬೇಕು?'[41] ತನ್ನಕ್ಕನ ಮಗಳ ಗಂಡನ ಮನೆ ನೋಡಲು, ಮದುಮಗಳ ಚಿಕ್ಕಮ್ಮನಾಗಿ ಮೆರೆಯಲು ತನಗಾಸೆ ಇಲ್ಲವೆ? ಆದರೆ ತನ್ನ ಅಕ್ಕನಿಗೆ ಖಾನರ ಸ್ವಭಾವದ ಪರಿಚಯವಿಲ್ಲವೆಂದು ಫಾತಿಮ್ಮ ಚೆನ್ನಾಗಿ ಬಲ್ಲಳು. ಮದುಮಗಳು ಹೊರಡುವವರೆಗಾದರೂ ಇರು ಎಂದು ಅಕ್ಕ ಹೇಳಿದ್ದರಿಂದ ರಾತ್ರಿ ಬಹಳ ಹೊತ್ತಾಗಿತ್ತು. ಅಕ್ಕ ನಿನ್ನ ಗಂಡು ಮಕ್ಕಳಲ್ಲಿ ಯಾರನ್ನಾದರೂ ಕಳಿಸು. ನಾನೀಗಲೇ ಹೋಗಬೇಕು"[42] ಎಂದು ಹೊರಟು ಮನೆಯೊಳಗೆ ಹೊಕ್ಕಾಗ ಖಾನರ ರೌದ್ರವತಾರ ಆಕೆಯನ್ನು ಇದಿರ್ಗೊಂಡಿತು. ತನ್ನೊಡನೆ ಬಂದ ಅಕ್ಕನ ಮಗನನ್ನು ಮನೆಯೊಳಗೂ ಕರೆಯದೆ ಹೊರಗಿನಿಂದಲೇ ಬೀಳ್ಕೊಡುವ ಸನ್ನಾಹ ಆಕೆಯದು. ಆದರೆ ಅದಕ್ಕೂ ಮೊದಲೇ ಖಾನರು ತಮ್ಮ ಸ್ವಭಾವದ ಪರಿಚಯ ಮಾಡಿಸಿಯೇ ಬಿಟ್ಟರು.

"ಕಳ್ಳ ಸೂಳೇ, ಎಲ್ಲಿಗೆ ಹೋಗಿದ್ದೆ ಇಷ್ಟು ಹೊತ್ತು? ಮಿಂಡರನ್ನು ಹುಡುಕಿಕೊಂಡು ಹೋಗಿದ್ದೆಯಾ?"[43] ಎಂದು ಖಾನರು ಬೆತ್ತವನ್ನು ಕೈಯಲ್ಲಿ ಹಿಡಿದು ಗರ್ಜಿಸುತ್ತಿದ್ದುದನ್ನು ಕಂಡ ಅಕ್ಕನ ಮಗ ಮುಂದಿನ ದೃಶ್ಯಕ್ಕೆ ಕಾಯದೆ 'ಬರ್ತೆನೆ ಚಿಕ್ಕಮ್ಮ' ಎನ್ನುತ್ತಾ ಹೊರಗಿನಿಂದಲೇ ಬೀಳ್ಕೊಡುವುದೂ ಫಾತಿಮ್ಮಳ ಬೆನ್ನಿಗೆ ಬೆತ್ತದ ಏಟು ಬೀಳುವುದೂ ಏಕ ಕಾಲದಲ್ಲಾಗಿತ್ತು. ಬೆತ್ತದ ಏಟು ಬೀಳುವುದೂ ಏಕ ಕಾಲದಲ್ಲಾಗಿತ್ತು. ಬೆತ್ತದ ಏಟಿನ ನೋವಿಗಿಂತಲೂ ಅಕ್ಕನ ಮಗನೆದುರಿಗಾದ ಅವಮಾನದ ನೋವಿನಿಂದ ತತ್ತರಿಸಿದ್ದಳು. ಫಾತಿಮ್ಮ ಆ ಮೇಲೆಂದೂ ಆಕೆ ಮನೆಯಿಂದ ಹೊರಗೆ ಕಾಲಿಟ್ಟರಲಿಲ್ಲ. ಹೀಗೆ ಗಂಡಸರು ಮನೆಯ ಹೆಂಗಸರ ಮೇಲೆ ನಿಯಂತ್ರಣ ಮಾಡುವುದು ಕಂಡುಬರುತ್ತವೆ. ಮುಸ್ಲಿಂ ಸಮುದಾಯದ ಹೆಂಗಸರು ಒಬ್ಬಂಟಿಯಾಗಿ ನದಿಯನ್ನು ದಾಟುವಂತಹ ಮನಸ್ಥಿತಿಯನ್ನು ಕಳೆದುಕೊಂಡಿರುವುದನ್ನು ಸಾರಾ ಅವರ 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ತಿಳಿಯಬಹುದಾಗಿದೆ. ನಾದಿರಾಳು ತಾನ್ನೊಬ್ಬಳೇ ಎಂದು ನದಿಯನ್ನು ದಾಟುವಂತಿಲ್ಲ. ಒಬ್ಬಳೇ ದೋಣಿಯಲ್ಲಿ ಕುಳಿತು ಎಂದೂ ಎಲ್ಲಿಗೂ ಹೋದವಳಲ್ಲ. ಮಗುವನ್ನೆತ್ತಿಕೊಂಡು ತಂದೆಗೆ ತಿಳಿಯದಂತೆ ದೋಣಿಯಲ್ಲಿ ಕುಳಿತರೆ ಅದರಲ್ಲಿರುವವರೆಲ್ಲರೂ ತನಗೆ ಪರಿಚಿತರಾಗಿರುವರು. "ಏನು ಮಹಮ್ಮದ್ ಖಾನರ ಮಗಳು ಒಬ್ಬಳೇ ಎಲ್ಲಿಗೆ ಹೊರಟೆ? ತಂದೆ ಎಲ್ಲಿ? ಎಂದು ಎಲ್ಲರೂ ಕೇಳಿದರೆ ಹೇಗೆ ಎಂದು ನಾದಿರಾ ನಿಯಂತ್ರಣದ ಚೌಕಟ್ಟಿನಲ್ಲಿ ಬಂಧಿಯಾಗಿ"[44] ನೂರಾರು ರೀತಿಯಲ್ಲಿ ಚಿಂತಿಸುವ ಬಗೆಯು ಕಂಡುಬರುವುದು.

'ವಜ್ರಗಳು' ಕಾದಂಬರಿಯಲ್ಲಿ ಉಸ್ಮಾನರು ತನ್ನ ಪತ್ನಿಗೆ ಪ್ರತಿಯೊಂದು ವಿಷಯಕ್ಕೂ ನಿಯಂತ್ರಣವನ್ನು ಹೇರಿದನು. ಪತ್ನಿ ಮನೆಗೆ ಬಂದದ್ದೇ ಹುಸೈನನಿಗೆ ಕೋಡು ಮೂಡಿದಂತಾಯಿತು. ಮೌಲವಿಗಳ ಪ್ರಭಾವಕ್ಕೊಳಗಾದ ಆತನು ಪತ್ನಿಯ ಮೇಲೆ ಹಕ್ಕು ಚಲಾಯಿಸಲಾರಂಭಿಸಿದನು. ಮೊತ್ತ ಮೊದಲಾಗಿ ಆತನು ಪತ್ನಿಗೆ ತಾಕಿತ್ತು ಮಾಡಿದನು. "ಹಗಲು ಹೊತ್ತಿನಲ್ಲಿ ಮಾಳಿಗೆಯಿಂದ ಕೆಳಗಿಳಿಯಲೇಬಾರದು, ಮನೆಯ ಅಂಗಳದಲ್ಲಿ ಪರಪುರುಷರಾದ ಕೆಲಸದವರು ಓಡಾಡುತ್ತಿರುವ ಕಾರಣ ನನ್ನ ಹೆಂಡತಿ ಅವರ ಕಣ್ಣಿಗೆ ಬೀಳಬಾರದು ಎಂದು ಕಟ್ಟಳೆಗಳನ್ನು ಹೇರಿದನು. ಇದರಿಂದ ಹಮೀದಾ ಮಾಳಿಗೆಯಲ್ಲಿ ಬಂಧಿಯಾದಳು. ಊಟ ತಿಂಡಿಗಳನ್ನು ಮಾಳಿಗೆಗೆ ಸರಬರಾಜು ಮಾಡಲು ಹುಡುಗಿಯೊಬ್ಬಳ ನೇಮಕವಾಯಿತು. ಕಕ್ಕಸಿಗೆ ಹೋಗಲು ರಾತ್ರಿಯಲ್ಲಿ ಮಾತ್ರ ಮಹಡಿಯಿಂದ ಕೆಳಗಿಳಿಯಬಹುದೆಂದು ಅಪ್ಪಣೆ ಕೊಟ್ಟಿದ್ದನು. ಆಕೆಯ ಗಂಡ. ಹಮೀದಾ ಗಂಡನ ಮಾತನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದರೂ ಕೆಲವೊಮ್ಮೆ ಆಕೆಗೆ ಗಂಡನಿಂದ ಹೊಡೆತ ಬೀಳುತ್ತಿತ್ತು. ಕಿಟಕಿಯ ತೆರೆಯನ್ನು ಸರಿಸಿ ತೋಟದಲ್ಲಿ ಕೆಲಸ ಮಾಡುತ್ತಿದ್ದ ಪರಪುರುಷನನ್ನು ಇಣುಕಿ ನೋಡಿದಳೆಂಬ ಕಾರಣಕ್ಕಾಗಿ ಅಥವಾ ಎಲೆಯಡಿಕೆ ತಿಂದು ತುಟಿಗಳು ತುಂಬ ಕೆಂಪಾಗಿವೆಯೆಂಬ ಕಾರಣಕ್ಕಾಗಿ: ಅಥವಾ ಸಮಯಕ್ಕೆ ಸರಿಯಾಗಿ ನಮಾಜ್ ಮಾಡಲಿಲ್ಲ ಎಂಬ ಕಾರಣಕ್ಕಾಗಿ.[45] ನಫೀಸಾಳ ಜೊತೆ ಮಗಳು ಸೆಲ್ಮಾ ತೋಟದಲ್ಲಿ ಸುತ್ತಾಡುತ್ತಿದ್ದುದನ್ನು ಮಹಡಿಯ ಮೇಲಿಂದ ನೋಡಿದ ಹುಸೈನನು ಕಿಡಿಕಿಡಿಯಾಗಿದ್ದನು. ಮೈ ನೆರೆದ ಹೆಣ್ಣು ಮಗಳು ಈ ರೀತಿ ಸುತ್ತಾಡುವುದೇ? ಅಲ್ಲಿ ಪರಪುರುಷರಾದರೂ ಇದ್ದರೆ? ಅವರಿಬ್ಬರೂ ಮನೆಗೆ ಮರಳಿದಾಗ ಹುಸೈನನು ರೌದ್ರವತಾರ ತಾಳಿದ್ದನು. ಅವನು ಒಳಬರುತ್ತಿದ್ದಂತೆಯೇ ತಂಗಿಯ ಕೈ ಹಿಡಿದೆಳೆದು ಆಕೆಯ ಬೆನ್ನಿನ ಮೇಲೆ ರಪರಪನೆ ಬಾರಿಸಿದನು. "ನಿನಗೆ ಹೇಳುವವರು, ಕೇಳುವವರು ಯಾರು ಇಲ್ಲವೆಂದು ಕೊಂಡೆಯಾ? ತಲೆಯ ಮೇಲೆ ಸರಿಯಾಗಿ ಬಟ್ಟೆಯೂ ಇಲ್ಲದೆ ಹೊರಗೆಲ್ಲಾ ಅಲೆಯುತ್ತೀಯಲ್ಲ? ನಾನು ಊರಿನಲ್ಲಿ ತಲೆ ಎತ್ತಿ ನಡೆಯಬೇಕೊ ಬೇಡವೊ? ಎಂದು ಘರ್ಜಿಸುತ್ತಾ ಮತ್ತು ಕೈ ಎತ್ತಿ ಹೊಡೆಯುವನು.[46]

ಒಟ್ಟಾರೆ ಗಂಡಿನ ಯಾಜಮಾನ್ಯ ನೆಲೆಯೆಂಬುದು ಹೆಣ್ಣಿನ ಬದುಕಿನಲ್ಲಿ ನಿಯಂತ್ರಣವನ್ನು ಏರಿ ಆಕೆ ಹೊರಗಿನ ಪ್ರಪಂಚದ ಅರಿವಿಲ್ಲದೇ ತನ್ನ ಅಸ್ತಿತ್ವದ ಚಹರೆಯನ್ನು ಕಳೆದುಕೊಳ್ಳುತ್ತ, ಪ್ರಾಪಂಚಿಕ ಜ್ಞಾನವನ್ನು ಪಡೆಯದೇ ಬಂಧನಕ್ಕೊಳಪಟ್ಟಿರುವುದನ್ನು ಕಾಣಬಹುದಾಗಿದೆ. ಹೆಣ್ಣನ್ನು ತಿರಸ್ಕಾರ ಮನೋಭಾವನೆಯಿಂದ ಕಂಡು ಆಕೆಯ ಭಾವನೆ, ಅಭಿವ್ಯಕ್ತಿಗೆ ಬೆಲೆಯನ್ನು ಕೊಡದೆ ಸದಾ ಗಂಡು ಹೇಳಿದ ಹಾಗೆ ಬಾಳಬೇಕು. ಆತ ಹೇಳಿದ ಹಾಗೆ ನಡೆದುಕೊಳ್ಳಬೇಕೆಂದು ಸಂಪ್ರದಾಯದ ಹೆಸರಿನಲ್ಲಿ, ಪ್ರೀತಿಯಿಂದ ಹೇಳುವ ನೆಪದಲ್ಲಿ ಹೆಣ್ಣನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಂಡಿರುವುದನ್ನು ಗುರುತಿಸಬಹುದಾಗಿದೆ.

**ಕೊನೆ ಟಿಪ್ಪಣಿಗಳು**

1. ಸಾರಾ ಅಬೂಬಕ್ಕರ್: ಸಹನಾ, ಪುಟ–56
2. ಸಾರಾ ಅಬೂಬಕ್ಕರ್: ವಜ್ರಗಳು, ಪುಟ–15
3. ಅದೇ, ಪುಟ–22
4. ಸಾರಾ ಅಬೂಬಕ್ಕರ್: ಸಹನಾ, ಪುಟ–25
5. ಸಾರಾ ಅಬೂಬಕ್ಕರ್: ಹೊತ್ತು ಕಂತುವ ಮುನ್ನ, ಪುಟ– 35
6. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ–04
7. ಅದೇ, ಪುಟ–03
8. ಸಾರಾ ಅಬೂಬಕ್ಕರ್: ಸಹನಾ, ಪುಟ–74
9. ಅದೇ, ಪುಟ–75
10. ಅದೇ, ಪುಟ–98
11. ಅದೇ, ಪುಟ–99
12. ಅದೇ, ಪುಟ–101
13. ಅದೇ, ಪುಟ–110
14. ಅದೇ, ಪುಟ–124
15. ಅದೇ, ಪುಟ–138
16. ಅದೇ, ಪುಟ–142

17. ಅದೇ, ಪುಟ–157
18. ಅದೇ, ಪುಟ–163
19. ಡಾ.ಶಿವಾನಂದ ಎಸ್.ವಿರಕ್ತಮಠ: ಮಹಿಳೆ ಮತ್ತು ಧರ್ಮ, ಪುಟ–25
20. ಸಾರಾ ಅಬೂಬಕ್ಕರ್: ವಜ್ರಗಳು, ಮುನ್ನುಡಿ–01
21. ಅದೇ, ಪುಟ–05
22. ಪ್ರೊ. ಕೇಶವ ಶರ್ಮ ಕೆ: ಸ್ತ್ರೀವಾದಿ ಚಿಂತನೆಗಳು, ಪುಟ–657
23. ಅದೇ, ಪುಟ–784
24. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ–21
25. ಅದೇ, ಪುಟ–28
26. ಅದೇ, ಪುಟ–32
27. ಅದೇ, ಪುಟ–45
28. ಸಾರಾ ಅಬೂಬಕ್ಕರ್: ಸಹನಾ, ಪುಟ–67
29. ಅದೇ, ಪುಟ–97
30. ಅದೇ, ಪುಟ–103
31. ಅದೇ, ಪುಟ–107
32. ಸಾರಾ ಅಬೂಬಕ್ಕರ್: ವಜ್ರಗಳು, ಪುಟ–50
33. ಅದೇ, ಪುಟ–98
34. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ–53
35. ಪ್ರೊ.ಕೇಶವ ಶರ್ಮ.ಕೆ: ಸ್ತ್ರೀವಾದಿ ಚಿಂತನೆಗಳು, ಪುಟ–309
36. ಸಾರಾ ಅಬೂಬಕ್ಕರ್: ಸಹನಾ, ಪುಟ–188
37. ಎಚ್.ಎಸ್. ಶ್ರೀಮತಿ: ದ ಸೆಕೆಂಡ್ ಸೆಕ್ಸ್, ಪುಟ–25
38. ಅದೇ, ಪುಟ–65
39. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ–84
40. ಬೋಳುವಾರು ಮಹಮ್ಮದ್ ಕುಂಞ: ಆಕಾಶಕ್ಕೆ ನೀಲಿ ಪರದೆ, ಪುಟ–33
41. ಅದೇ, ಪುಟ–57
42. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ–14
43. ಅದೇ, ಪುಟ–36
44. ಅದೇ, ಪುಟ–47
45. ಅದೇ, ಪುಟ–51
46. ಅದೇ, ಪುಟ–69

<u>ಅಧ್ಯಾಯ-3</u>

# ಹೆಣ್ಣು: ಪರಂಪರೆ ಮತ್ತು ಆಧುನಿಕತೆ

ಸಾಮಾನ್ಯವಾಗಿ ಹೆಣ್ಣೆಂದರೆ ಕನಿಷ್ಟತೆಯ ಮಟ್ಟದಲ್ಲಿ ಪರಿಗಣಿಸುವರು. ಅಲ್ಲದೇ ಒಂದು ವಸ್ತುವಾಗಿ ಆಕೆಯನ್ನು ತಮಗೆ ಬೇಕಾದ ಹಾಗೆ ಬಳಸಲ್ಪಡುವಂತಹ ಈ ಸಮಾಜದ ವ್ಯವಸ್ಥೆಯನ್ನು ಬದಲಾಯಿಸುವ ಸಾರಾರವರ ನಿಲುವುಗಳನ್ನು ತಿಳಿಯಬಹುದಾಗಿದೆ. ಸ್ತ್ರೀ ಸಂವೇದನೆಯ ಅಭಿವ್ಯಕ್ತಿಯನ್ನು ತಮ್ಮ ಬರವಣಿಗೆಯ ಮುಖಾಂತರ ಪರಂಪರೆಯ ಮೌಲ್ಯಗಳಾದ ಮೂಢನಂಬಿಕೆ, ಲಿಂಗತಾರತಮ್ಯ, ಜಾತಿಪದ್ಧತಿ, ವರದಕ್ಷಿಣೆಯನ್ನು ಮುರಿದು ಕಟ್ಟುವ ಪ್ರಯತ್ನವನ್ನು ಸಾರಾರವರು ಮಾಡಿರುವರು. ಇವರ ಕಾದಂಬರಿಗಳಲ್ಲಿ ಬರುವಂತಹ ಸ್ತ್ರೀ ಪಾತ್ರಗಳ ಆಲೋಚನೆಯ ಮಟ್ಟದಲ್ಲಿ ಆಧುನಿಕ ವಿಚಾರಗಳನ್ನು ಬಿಂಬಿಸುತ್ತಾ ಸಾಂಪ್ರದಾಯಿಕತೆಯ ಮೌಢ್ಯಗಳನ್ನು ಮೀರುವ ಪ್ರಯತ್ನಗಳ ನಿಲುವುಗಳನ್ನು ತಾಳಿದ ಮನೋಭೂಮಿಕೆಯನ್ನು ಗುರುತಿಸಬಹುದಾಗಿದೆ.

ಮಾರ್ಕಿಸ್ಟ್‌ರವರ ಪ್ರಕಾರ ಹೆಣ್ಣೆಂದರೆ "ಹೆಣ್ಣು ಎಂಬುದೊಂದು ಪ್ರತ್ಯೇಕ ವರ್ಗವಲ್ಲ. ಕೇವಲ ಅವಲಂಬಿ ಹಾಗೂ ಶೋಷಿತ ವರ್ಗವು ಸಮಾಜದಲ್ಲಿರುತ್ತದೆ. ಅದರಲ್ಲಿಯೇ ಸ್ತ್ರೀಯರು ಬರುತ್ತಾರೆ"[1] ಎಂದು ವ್ಯಾಖ್ಯಾನವನ್ನು ನೀಡಿರುವುದನ್ನು ಗಮನಿಸಬಹುದಾಗಿದೆ. ಪರಂಪರೆಯ ಸಾಂಪ್ರದಾಯಿಕತೆಯ ಕುಟುಂಬದಿಂದ ಬಂದ ಹೆಣ್ಣು ತಮ್ಮ ಸಮುದಾಯದ ಮೌಢ್ಯಗಳ ವಿಚಾರಗಳನ್ನು ಬರವಣಿಗೆಯ ಮುಖಾಂತರ ಬಿಂಬಿಸಲು ತೊಡಗಿದರೆ ಆಕೆಗೆ ಎದುರಾಗುವ ಸಮಸ್ಯೆಗಳು ಹಲವು. ಪುರುಷ ಪ್ರಧಾನ ಸಮಾಜವು ಹೆಣ್ಣನ್ನು ನಿಯಂತ್ರಣದ ಚೌಕಟ್ಟಿನಲ್ಲಿ ಆಳವಾಗಿ ಬೇರುರಿಸಲು ತೊಡಗುವರೇ ಹೊರತು ಅವರಿಗೆ ಸ್ವಾತಂತ್ರ್ಯವನ್ನು ನೀಡುವ ಮನಸ್ಸುಗಳು ಇರದೇ ಇರುವ ಸಂಗತಿಯನ್ನು ತಿಳಿಯಬಹುದಾಗಿದೆ. ಆಧುನಿಕತೆಯು ವ್ಯಕ್ತಿಯ ಅಂತರಂಗದ ಆಲೋಚನೆಯ ಮಟ್ಟಕ್ಕೆ ಸಂಬಂಧಪಟ್ಟಿರುವುದು ಆಗಿರುತ್ತದೆ. ಹೆಣ್ಣು ಗಂಡಿನ ದಬ್ಬಾಳಿಕೆ ಶೋಷಣೆಯಿಂದ ಹೊರಬಂದು ತನ್ನ ಅಸ್ತಿತ್ವವನ್ನು ಉಳಿಸಿಕೊಂಡು, ಹೊರಗಿನ ಪ್ರಾಪಂಚಿಕ ಜ್ಞಾನವನ್ನು ಪಡೆಯುತ್ತಾ ತನ್ನ ಇರುವಿಕೆಯನ್ನು ಉಳಿಸಿಕೊಳ್ಳುವ ಕಾರ್ಯದಲ್ಲಿ ತೊಡಗುವುದು ಜಾಗತಿಕ ಸಂದರ್ಭದಲ್ಲಿ ಅವಶ್ಯಕವಾಗಿರುತ್ತದೆ.

ಪರಂಪರೆಯಲ್ಲಿ ಹೆಣ್ಣಿನ ದುಡಿಮೆಗೆ ಯಾವುದೇ ರೀತಿಯ ಬೆಲೆಯು ಇರಲಿಲ್ಲ. ಹೆಣ್ಣಾದವಳು ನಾಲ್ಕು ಗೋಡೆಗಳ ಮಧ್ಯೆ ಕೌಟುಂಬಿಕ ಚೌಕಟ್ಟಿನಲ್ಲಿ ಉಳಿದುಕೊಂಡು ಮನೆಯ ಕೆಲಸಗಳನ್ನು ಮಾತ್ರ ಮಾಡಬೇಕಾಗಿತ್ತು. ಆದರೆ ತಲೆಮಾರುಗಳು ಬೆಳೆದ ಹಾಗೆ ವ್ಯಕ್ತಿಯ ಆಲೋಚನೆಯ ಮಟ್ಟದಲ್ಲಿಯೂ ಕೂಡ ಬದಲಾವಣೆ ಆಗಿ ಹೆಣ್ಣು ಕೈಗಾರಿಕರಣ ಸಂದರ್ಭದಲ್ಲಿ ದೇಸಿ ದುಡಿಮೆಗಳ ಕಡೆಗೆ ಒಲವು ತೋರುವುದು ಕಂಡುಬರುತ್ತದೆ. ಅಲ್ಲದೇ ದೇಸಿ ವಸ್ತುಗಳಿಗೆ ಆಧುನಿಕತೆಯ ಸಂದರ್ಭದಲ್ಲಿ ಹೆಚ್ಚಿನ ಬೆಲೆ ಕೂಡ ಸಿಗುವುದನ್ನು ಕಾಣಬಹುದಾಗಿದೆ. ಗಂಡು-ಹೆಣ್ಣಿನ ಸಂಬಂಧವನ್ನು ನೋಡುವ ಪರಂಪರೆಯ ದೃಷ್ಠಿಕೋನಕ್ಕೂ, ಜಾಗತೀಕರಣ ಸಂದರ್ಭದ ಆಧುನಿಕತೆಯ ಸಂದರ್ಭದಲ್ಲಿ ನೋಡುತ್ತಿರುವಂತಹ ದೃಷ್ಠಿಕೋನದಲ್ಲೂ ಭಿನ್ನತೆಯಿರುವುದನ್ನು ಗಮನಿಸಬಹುದಾಗಿದೆ. ಹೆಣ್ಣನ್ನು ಪೂಜ್ಯ ಭಾವನೆಯಿಂದ ನೋಡುತ್ತಿದ್ದಂತಹ ಪುರುಷ ಪ್ರಧಾನ ಸಮಾಜವು ಕಾಲ ಬದಲಾವಣೆ ಆದ ಹಾಗೆ ಹೆಣ್ಣನ್ನು

ಗುಲಾಮಳಾಗಿ ತನಗೆ ಹೇಗೆ ಬೇಕೋ ಹಾಗೆ ಆಕೆಯ ವ್ಯಕ್ತಿತ್ವದ ಗುಣಗಳನ್ನು ಬದಲಾಯಿಸಿಕೊಳ್ಳುವಂತೆ ಮಾಡಿ ಧರ್ಮದ ಮೌಲ್ಯಗಳನ್ನು ಆಕೆಯಲ್ಲಿ ಬಿಂಬಿಸುತ್ತಾ ಬಂಧನದ ಚೌಕಟ್ಟಿನಲ್ಲಿರಿಸಿರುವುದು ಕಂಡುಬರುವುದು.

ಒಂದು ಸಮುದಾಯದ ನಂಬಿಕೆ, ಆಚರಣೆ, ಸಂಪ್ರದಾಯದ ಮೂಲಕ ಪುರುಷ ಪ್ರಧಾನ ಸಮಾಜವು ಹೆಣ್ಣಿನ ಮೇಲೆ ದಬ್ಬಾಳಿಕೆಯನ್ನು ನಡೆಸುತ್ತಾ ಆಕೆಯನ್ನು ಸೀಮಿತವಾದ ಚೌಕಟ್ಟಿನ ಬಂಧನದಲ್ಲಿ ಇಟ್ಟು ಶೋಷಣೆಯನ್ನು ಮಾಡುತ್ತಾ ಹೆಣ್ಣು ಗಂಡಿನ ಮಾತಿಗೆ ಮರು ಪ್ರಶ್ನೆಯನ್ನು ಕೇಳಬಾರದು. ಆತ ಹೇಳಿದ ಹಾಗೆ ಜೀವನವನ್ನು ಸಾಗಿಸಬೇಕು. ಹೆಣ್ಣಾಗಿ ಹುಟ್ಟಿದ ಮೇಲೆ ಆಕೆ ಗಂಡು ಯಾವ ತಪ್ಪುಗಳನ್ನು ಮಾಡಿದರೂ ಸಹ ಕ್ಷಮಿಸುವಂತಹ ಮನೋಭಾವನೆಯಿರಬೇಕು ಎಂಬುದು ಬಾಲ್ಯದಿಂದಲೂ ಹೆಣ್ಣಿನ ಮನಸ್ಸಿನಲ್ಲಿ ನೂರಾರು ವಿಚಾರಗಳನ್ನು ಕುಟುಂಬ ವಲಯದಲ್ಲಿ ತಿಳಿಸಿರುತ್ತಾರೆ. ಕುಟುಂಬ ವ್ಯವಸ್ಥೆಯೆಂಬುದು ಒಂದು ಸಾಮಾಜಿಕ ರಚನೆಯಾಗಿರುವಂತಹುದು. ಸಾಮಾನ್ಯವಾಗಿ ಮನೆಯ ಆರ್ಥಿಕತೆಗೆ ಸಂಬಂಧಿಸಿದಂತೆ ಹೊರಗಿನ ಕೆಲಸವನ್ನು ಗಂಡು ಮಾಡಬೇಕು. ಹೆಣ್ಣು ಮನೆಯ ನಾಲ್ಕು ಗೋಡೆಗಳ ಮಧ್ಯೆಯೇ ಉಳಿದುಕೊಂಡು ಮನೆಕೆಲಸ, ಮಗುವಿನ ಆರೈಕೆ, ಹಿರಿಯರ ಸೇವೆ ತನಗೆ ಎಷ್ಟೇ ದಣಿವಾಗಿದ್ದರೂ ಸಹಿತ ಗಂಡಿನ ಆಸೆಗಳನ್ನು ಪೂರೈಸುತ್ತಾ ಆಕೆ ಜೀವನವನ್ನು ನಡೆಸುವವಳು ಎಂಬುದಾಗಿ ಸಾರಾ ಅಬೂಬಕ್ಕರ್‌ರವರ ಕಾದಂಬರಿಗಳಲ್ಲಿ ಗಮನಿಸಬಹುದಾಗಿದೆ.

ಹೆಣ್ಣಾಗಿ ಹುಟ್ಟಿದ ಮೇಲೆ ಆಕೆ ಜೀವನ ಪರ್ಯಂತವಾಗಿ ದುಡಿಮೆಯನ್ನು ಮಾಡಲೇಬೇಕು. ಗಂಡಿನ ಅಧೀನತೆಯಲ್ಲಿ ಸಿಲುಕಿ ತನ್ನ ಬೇಕು ಬೇಡಗಳನ್ನು ಗಂಡನೊಂದಿಗೆ ಪರಸ್ಪರ ವಿಚಾರಗಳನ್ನು ಹಂಚಿಕೊಳ್ಳದೇ ತನಗೆ ಎಂತಹ ಸಂಕಷ್ಟ ಹೊದಗಿದರೂ ಸಹ ಆಕೆ ಮನಸ್ಸಿನಲ್ಲೆ ಕೊರಗಿ ತನ್ನ ದೇಹಸ್ಥಿತಿಯನ್ನು ಹದಗೆಡಿಸಿಕೊಂಡು ಆಕೆ ಮುಳ್ಳಿನ ಬೇಲಿಯಲ್ಲಿ ಸಿಲುಕಿದ ಹೊದಿಕೆಯಂತೆ ತನ್ನ ಜೀವನದ ಸಂಗತಿಗಳನ್ನು ಮೆಲುಕು ಹಾಕಿ ಗೃಹ ಕೆಲಸವನ್ನು ಮಾಡತೊಡಗುವಳು. ಮುಸ್ಲಿಂ ಸಮುದಾಯದ ಮಹಿಳೆಯರು ಗಂಡನಿಂದ ಹಿಂಸೆಯನ್ನು ಅನುಭವಿಸುತ್ತಿದ್ದರೂ ಅವರು ನೇರವಾಗಿ ಎಂದು ಪ್ರತಿಭಟಿಸಿ ಎದುರು ನಿಲ್ಲುತ್ತಿರಲಿಲ್ಲ. ಸದಾ ಮೌನಿಯಾಗಿ ಗಂಡು ಹೇಳಿದ ಹಾಗೆ ನಡೆದುಕೊಂಡು, ಗಂಡಿನ ಬಯಕೆಗನುಗುಣವಾಗಿ ಆತನ ಆಸೆ-ಆಕಾಂಕ್ಷೆಗಳನ್ನು ಈಡೇರಿಸುವಂತಹ ದೇಹವಾಗಿ ಮಾತ್ರ ಇರುವುದು ಎಂಬುದಾಗಿ ತಿಳಿದ ಮನಸ್ಸುಗಳು ಈ ಸಮಾಜದಲ್ಲಿ ಇರುವುದನ್ನು ಗಮನಿಸಬಹುದಾಗಿದೆ. ಮುಸ್ಲಿಂ ಸಮುದಾಯದ ಹೆಣ್ಣಿನ ಬದುಕಿನ ಅನನ್ಯ ಅನುಭವ ಲೋಕವನ್ನು ಗುರುತಿಸುತ್ತಾ ಅದರಾಚೆಗಿನ ಕಾಲ, ದೇಶ, ಧರ್ಮಗಳನ್ನು ಮೀರಿದ ಮಹಿಳಾ ಅನುಭವ ವಲಯವನ್ನು ಕಟ್ಟಲು ತೊಡಗಿರುವುದು ಕಂಡುಬರುತ್ತದೆ. ಹೆಣ್ಣು ವ್ಯವಸ್ಥೆಯೊಂದಿಗೆ ನಡೆಸುವ ಅಮೂರ್ತ ಪ್ರತಿರೋಧ ನೆಲೆಗಳನ್ನು ವಿವರಿಸುತ್ತಾ ಹೆಣ್ಣಿನ ನಿಯಂತ್ರಣ, ನೋವು, ನಲಿವುಗಳನ್ನು ಸಾರಾರವರು ತಮ್ಮ ಕಾದಂಬರಿಗಳ ಮೂಲಕ ತಿಳಿಸಿದ್ದಾರೆ.

ಹೆಣ್ಣು ಮಕ್ಕಳು ಪರಂಪರೆಯ ಚೌಕಟ್ಟಿನಲ್ಲಿ ಸಿಲುಕಿ ನಿಯಂತ್ರಣಕ್ಕೆ ಬಂಧಿತಳಾಗಿದ್ದರಿಂದ ಹೊರಬಂದು, ಆಧುನಿಕ ಉತ್ಪಾದನೆಯ ಕ್ರಮದಲ್ಲಿ ಮಹಿಳೆಯರೂ ಮನೆಯಿಂದ ಹೊರಗೆ ಬಂದು ದುಡಿದು ಬೇಕಾದ ಅವಶ್ಯಕತೆಯು ಸೃಷ್ಟಿಯಾಗಿರುವುದು ಕಂಡುಬರುತ್ತದೆ. ಮಧ್ಯಮ ವರ್ಗದ ಕುಟುಂಬದ ಸ್ವರೂಪದಲ್ಲಿಯೂ ವ್ಯಾಪಕ ಬದಲಾವಣೆಯಾಗಿದೆ. ಆಧುನಿಕ ಯುಗದಲ್ಲಿ ಬೇರೆ ಬೇರೆ ಕಸುಬುಗಳಲ್ಲಿ

ಮಹಿಳೆಯರು ತೊಡಗಿಸಿಕೊಳ್ಳಬೇಕಾದ ಪ್ರಸಂಗ ಬಂದಿದೆ. ಇದನ್ನು ಸಾರಾರವರ ಕೃತಿಗಳಲ್ಲಿ ಗುರುತಿಸಬಹುದಾಗಿದೆ. ದಕ್ಷಿಣ ಕನ್ನಡ, ಉಡುಪಿ ಜಿಲ್ಲೆ ಹಾಗೂ ಕಾಸರಗೋಡಿನ ಪರಿಸರದ ಸಂಗತಿಗಳನ್ನು ಗಮನಿಸಿದಾಗ ಆರ್ಥಿಕ ದುಡಿಮೆಯಲ್ಲಿ ಹೇಗೆ ಬದಲಾವಣೆ ಆಗಿದೆ ಎಂದು ತಿಳಿಯಬಹುದಾಗಿದೆ. ಆಧುನಿಕ ಸಂದರ್ಭದಲ್ಲಿ ಮಹಿಳೆಯರು ಬ್ಯಾಂಕುಗಳು, ಶೈಕ್ಷಣಿಕ ಸಂಸ್ಥೆಗಳು, ಲೋಕೋಪಯೋಗಿ ಇಲಾಖೆ, ತಾಲ್ಲೂಕು ಆಫೀಸು ಹೀಗೆ ಅಸಂಖ್ಯ ಉದ್ಯೋಗಗಳಲ್ಲಿ ಮಹಿಳೆಯರು ತೊಡಗಿಸಿಕೊಂಡಿದ್ದಾರೆ.

ರೇಮಾಂಡೊ ಫಣಿಕ್ಕರರ ಪ್ರಕಾರ ಪರಂಪರೆ ಎಂಬುದು "ಜನಾಂಗದ ಸ್ಮೃತಿ" ಎಂದು ಹೇಳಿದ್ದಾರೆ.[2] ಪುರುಷ ಪ್ರಧಾನ ಸಮಾಜವು ತಮ್ಮ ಆಲೋಚನೆಗೆ ಅನುಗುಣವಾಗಿ ಹೆಣ್ಣಿನ ಮೇಲೆ ನಿರ್ಬಂಧಗಳನ್ನು ವಿಧಿಸಿರುತ್ತಾರೆ. ಪರಂಪರೆಯ ಮೌಲ್ಯಗಳಲ್ಲಿ ಸಿಲುಕಿ ಹೆಣ್ಣು ಬದುಕನ್ನು ನಡೆಸಿದರೆ ಅದೇ ಸಮುದಾಯದ ಇತರ ಸ್ತ್ರೀಯರು ಚೌಕಟ್ಟನ್ನು ಮೀರಿ ಬದುಕನ್ನು ನಡೆಸುವುದು ಕಂಡುಬರುವುದು. ಮುಸ್ಲಿಂ ಸಮುದಾಯದ ಮಹಿಳೆಯರು ಕುಟುಂಬ, ಆರ್ಥಿಕತೆ, ಶಿಕ್ಷಣದ ಬಗೆಯಲ್ಲಿ ಹೇಗೆ ಪರಂಪರೆಯಿಂದ ತನ್ನ ಅಸ್ತಿತ್ವದ ಚಹರೆಯನ್ನು ಬದಲಾಯಿಸಿಕೊಂಡು ಆಧುನಿಕತೆಯ ಕಡೆಗೆ ಚಲಿಸಿ, ಪುರುಷನ ಅಧೀನತೆಯಿಂದ ಬಿಡುಗಡೆಯನ್ನು ಪಡೆದು ತಾನು ಎಲ್ಲಾರಂತೆ ಸ್ವತಂತ್ರವಾಗಿ ಜೀವನವನ್ನು ನಡೆಸಬಲ್ಲೆನು ಎಂಬಂತಹ ಮನಸ್ಥಿತಿಯ ನಿಲುವುಗಳನ್ನು ಸಾರಾ ಅವರ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ.

### 1. <u>ಕೌಟುಂಬಿಕ ಚೌಕಟ್ಟು:</u>

ವಿವಾಹದ ಮೂಲಕ ಕೌಟುಂಬಿಕ ಚೌಕಟ್ಟಿನಲ್ಲಿ ಹೆಣ್ಣನ್ನು ನಿಯಂತ್ರಣದ ನೆಲೆಯ ಸ್ಥಿತಿಯು ಆರಂಭದಲ್ಲಿ ಇದ್ದ ಬಗೆಯನ್ನು ಗಮನಿಸಿದಾಗ ಕಂಡುಬರುವ ಅಂಶವೆಂದರೆ, ಆದಿಮಾನವ ಕಾಲದಿಂದ ಗುಂಪಾಗಿ ಜೀವಿಸುತ್ತಿದ್ದ ಮಾನವರ ಗುಂಪಿಗೆ ಹೆಣ್ಣು ನಾಯಕಿಯಾಗಿರುತ್ತಿದ್ದರು. ಬೇಟೆಯ ನಾಯಕತ್ವ ವಹಿಸಿಕೊಳ್ಳುತ್ತಿದ್ದಳು. ಆಗ ಇನ್ನೂ ಖಾಸಗಿ ಆಸ್ತಿ, ಆಹಾರಧಾನ್ಯ ಬೆಳೆಯುವ ಪದ್ಧತಿ ಕಂಡುಹಿಡಿದಿರಲಿಲ್ಲ. ಬೆಳೆ ಬೆಳೆಯುವುದನ್ನು ಕಂಡುಹಿಡಿದ ನಂತರ ಮಿಕ್ಕುವ ಆಹಾರದ ರಕ್ಷಣೆ ಮಕ್ಕಳ ಪಾಲನೆಯಲ್ಲಿ ಹೆಣ್ಣು ತೊಡಗಿದಳು. ಖಾಸಗಿ ಆಸ್ತಿಯ ಉಗಮದೊಂದಿಗೆ ಹೆಣ್ಣು ತನ್ನ ಅಸ್ತಿತ್ವ ಕಳೆದುಕೊಳ್ಳುತ್ತಾ ಬಂದಳೆಂದು "ಕುಟುಂಬ, ಖಾಸಗಿ ಆಸ್ತಿ ಮತ್ತು ರಾಜ್ಯದ ಮೂಲ" ಎಂಬ ಕೃತಿಯಲ್ಲಿ ಎಂಗೆಲ್ಸ್ ಬರೆದಿದ್ದಾರೆ.[3]

ಖಾಸಗಿ ಆಸ್ತಿ, ಗೋವು, ಆಹಾರ ಸಂಗ್ರಹವಾದಂತೆ ಪುರುಷರು ಒಡೆತನ ಸ್ಥಾಪಿಸಿದರು. ಅನಿರ್ಬಂಧಿತ ಲೈಂಗಿಕ ವ್ಯವಸ್ಥೆ ನಿರ್ಬಂಧಿತವಾಯಿತು. ತಂದೆಯಿಂದ ಆ ಕುಟುಂಬದ ಪರಿಗಣನೆ ಆರಂಭವಾಯಿತು. ಇಂದಿನ ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆಯಲ್ಲಿ ಸಿಲುಕಿ ಹೆಣ್ಣು ಅನುಭವಿಸುವ ಸಂಕಷ್ಟಗಳು ತಿಳಿಯುತ್ತದೆ. ಅದರಲ್ಲೂ ಧಾರ್ಮಿಕ, ಸಾಂಪ್ರದಾಯಿಕ ನಿಯಮಗಳ ಹೇರಿಕೆಯಿಂದ ಬಳಲುವ ಸಂಗತಿಗಳು ಕಂಡುಬರುತ್ತದೆ. ಕೌಟುಂಬಿಕ ನೆಲೆಯಲ್ಲಿ ನಿರಂತರ ಶೋಷಣೆಗೊಳಗಾಗುತ್ತ ಬದುಕಿದ್ದಾಳೆ. ಲಿಂಗತಾರತಮ್ಯ, ಕೆಲಸದ ವಿಭಜನೆ, ಮೇಲರಿಮೆ, ಕೀಳರಿಮೆಗಳಿಗೆ ಕಾರಣವಾಗಿದೆ, ಹೆಣ್ಣಿನ ಮೇಲೆ ಪುರುಷನು ಪರಂಪರೆಯ ಮೌಲ್ಯಗಳನ್ನು ಹೇರುತ್ತ ಬಂದಿರುವುದನ್ನು ಗುರುತಿಸಬಹುದಾಗಿದೆ. ಪುರುಷನು ತನ್ನ ಹಿತಾಸಕ್ತಿಗನುಗುಣವಾಗಿ ಅವಳನ್ನು ತನ್ನ ಅಧೀನ ನೆಲೆಗೆ ತಂದುಕೊಳ್ಳುತ್ತಾನೆ.

ಕುಟುಂಬದ ಕೇಂದ್ರ ಬಿಂದು ಹೆಣ್ಣು ಆಗಿದ್ದರೂ, ಸಹ ಆಸ್ತಿ ಹಕ್ಕು, ಮಕ್ಕಳ ಒಡೆತನ, ಲೈಂಗಿಕತೆ, ಮುಂತಾದವುಗಳ ಮೇಲೆ ಪುರುಷನ ನಿಯಂತ್ರಣವಿರುವ ಸಮಾಜ ವ್ಯವಸ್ಥೆಯಿರುವುದನ್ನು ಗುರುತಿಸಬಹುದಾಗಿದೆ.

ಇಸ್ಲಾಂ ಧರ್ಮದ ಕೌಟುಂಬಿಕ ನೆಲೆಗಳೂ ಸಹ ಪಿತೃಪ್ರಧಾನ ನೆಲೆಯಲ್ಲಿರುವುದು ಕಂಡುಬರುವುದು. ಸಮಾಜದಲ್ಲಿ ಇದು ಒಪ್ಪಿತ ಮೌಲ್ಯಗಳಾಗಿ ರೂಪುಗೊಂಡಿರುವುದು. ಇಂತಹ ಕುಟುಂಬ ವ್ಯವಸ್ಥೆಯಲ್ಲಿ ಪಿತೃ ಪ್ರಾಧಾನ್ಯತೆಯ ಮೂಲದಲ್ಲಿ ಸ್ತ್ರೀಯರ ಅಧೀನತೆ ಅಡಗಿರುತ್ತದೆ. ಸ್ತ್ರೀಯ ಪರಿಗಣನೆ, ಅಸ್ತಿತ್ವ, ಕೌಟುಂಬಿಕ ನಿರ್ವಹಣೆ, ಮುಸ್ಲಿಂ ಸಮುದಾಯದ ಕೃತಿಗಳಲ್ಲಿ ವ್ಯಕ್ತಗೊಂಡ ಸಂಗತಿಗಳನ್ನು ಗಮನಿಸಬಹುದಾಗಿದೆ. ಕೌಟುಂಬಿಕ ಚೌಕಟ್ಟಿನಲ್ಲಿ ವೈವಾಹಿಕ ನೆಲೆಯಲ್ಲಿ ಸ್ತ್ರೀಯರನ್ನು ದಮನಿಸುವ ಚಿತ್ರಣವನ್ನು ಇಲ್ಲಿ ಗುರುತಿಸಲಾಗಿದೆ. ಕುಟುಂಬ ಚೌಕಟ್ಟಿನ ವ್ಯವಸ್ಥೆಯಲ್ಲಿ ಅಸಮಾನತೆಯ ಆಧಾರದಿಂದ ನಿಂತಿರುವುದು ಕಂಡುಬರುತ್ತದೆ. ಕುಟುಂಬ ವಲಯದಲ್ಲಿ ಗಂಡು-ಹೆಣ್ಣು ಮಕ್ಕಳನ್ನು ಬೆಳೆಸುವಂತಹ ವಿಧಾನದಲ್ಲೇ ಭಿನ್ನತೆಯಿರುವುದು. ಹೆಣ್ಣು ಮದುವೆಯಾಗಿ ಗಂಡನ ಮನೆಗೆ ಹೋಗಿ, ತನ್ನ ಹಿಂದಿನ ಪರಿಸರವನ್ನು ಮರೆತು ಅಲ್ಲಿನ ಪರಿಸರವನ್ನೇ ತನ್ನ ಪರಿಸರವೆಂದು ನಂಬಿ ಆ ಕುಟುಂಬದ ಎಲ್ಲಾ ಜವಾಬ್ದಾರಿಯನ್ನೂ ಗೃಹಕೃರ್ತ, ಮಕ್ಕಳ, ವೃದ್ಧರ ಪಾಲನೆ.... ಇತ್ಯಾದಿಗಳನ್ನು ನಿರ್ವಹಿಸಬೇಕೆಂಬ ಕಟ್ಟುಪಾಡಿನ ಹಿಂದೆ ನಮ್ಮ ಪುರುಷ ನಿರ್ಮಿತ ಸಮಾಜ ಹಾಗೂ ಸಂಸ್ಕೃತಿಯ ಹೆಸರಿನಲ್ಲಿ ವಿಧಿಸಿರುವುದು ಕಂಡುಬರುತ್ತದೆ. ಕುಟುಂಬವನ್ನು ಸಮಾಜ ವ್ಯವಸ್ಥೆಯು ರೂಪಿಸಿಕೊಂಡು ಬಂದ ಸಾಂಸ್ಥಿಕ ಸ್ವರೂಪವಾಗಿದೆ. ಕೌಟುಂಬಿಕ ಯಾಜಮಾನ್ಯವನ್ನು ನಿರ್ವಹಿಸುವ ಪುರುಷ ನೆಲೆಯನ್ನು ಧರ್ಮಗಳು ಒಪ್ಪಿಕೊಂಡಿದ್ದರಿಂದ ಪುರುಷ ಪ್ರಧಾನ ಸಮಾಜವು ಸ್ತ್ರೀಯನ್ನು ಪರಿಧಿಗೆ ಸರಿಸಿತು. ಹೀಗೆ ಧರ್ಮ ಮತ್ತು ಪುರುಷ ಪ್ರಧಾನತೆಗಳ ಪ್ರತಿಪಾದನೆಯಿಂದ ಸ್ತ್ರೀಯು ಗೃಹಬಂಧಿಯಾಗಿ ಗೃಹಿಣಿ ಅಸ್ತಿತ್ವವನ್ನು 'ತಾಯ್ತನ'ದ ಹೊಣೆಗಾರಿಕೆಯನ್ನು ಒಪ್ಪಿಕೊಂಡು ಬದುಕುವುದು ಕಂಡುಬರುವುದು. ಇದನ್ನು ಮೀರಿ ಹೊರಬಂದರೆ ನಿಂದನೆಗಳಿಗೆ ಗುರಿಯಾಗಬೇಕಾದುದರಿಂದ ಕೌಟುಂಬಿಕ ರಚನೆಯಲ್ಲಿ ಹೆಣ್ಣು ತನ್ನ ಬದುಕನ್ನು ನಡೆಸುವುದನ್ನು ಗುರುತಿಸಬಹುದಾಗಿದೆ.

ಹೆಣ್ಣಿಗೆ, ನೀನು ಹೀಗಿರಬೇಕು, ಹೀಗೆ ಮಾಡಬೇಕು ಎಂದು ನಿರ್ದೇಶಿಸಿ ಅವಳನ್ನು ತನಗೆ ಬೇಕಾದಂತೆ ಒಂದು ಚೌಕಟ್ಟಿನಲ್ಲಿ ನಿಯಂತ್ರಿಸಿರುವುದು ಸಂಸ್ಕೃತಿಯ ಸಂಕೋಲೆಯಲ್ಲಿ ಬಂಧಿಸಿರುವುದು. ಅಸಮಾನತೆಯ ನೆಲೆಯ ಬಲಿಷ್ಠ ಮತ್ತು ಅಸಹಾಯಕತೆಯ ನಡುವಿನ ಆಧಾರದಿಂದ ಸೃಷ್ಟಿಯಾದದ್ದು ನಮ್ಮ ಪುರುಷ ಕೇಂದ್ರಿತ ಸಮಾಜ, ಹೆಣ್ಣಿನ ನೈಜ ಆಲೋಚನೆ, ವಿವೇಕ, ಜ್ಞಾನ, ಆರ್ದ್ರತೆ, ಅಂತಃಕರಣ, ಪ್ರೀತಿ ಯಾವುದೂ ಈ ಸಂಸ್ಕೃತಿಯಲ್ಲಿ ಪೂರ್ಣ ಪ್ರಮಾಣದಲ್ಲಿ ಆಕೆಗೆ ಅವಕಾಶವನ್ನು ಕೊಡದೇ ಇರುವುದೂ ಕಂಡುಬರುವುದು.

ಕೌಟುಂಬಿಕ ಚೌಕಟ್ಟಿನಲ್ಲಿ ಗಂಡು-ಹೆಣ್ಣಿನ ಸಂಬಂಧವನ್ನು ಕುರಿತಂತೆ ಈ ಸಾಲನ್ನು ಗಮನಿಸಬಹುದಾಗಿದೆ.

"ಒಲ್ಲೆ ಗಂಡನ ಕೂಟ ಒಗತನವ
ಅಕ್ಕಟ ಗಂಡನ ಮನೆ ಬಿರಿಸಯ್ಯಯ್ಯೋ

ಒಡಕು ಗಂಗಳದಲ್ಲಿ ನೀರಂಬಲಿಯ ನೀಡಿ
ಹೊಡೆದಳು ನಮ್ಮತ್ತೆ ಮೊರದಲ್ಲಿ
ಕಡು ದುಃಖದಿಂದ ನಾ ಒಲೆಯ ಮುಂದೆ ಕುಳಿತರೆ
ಕೊಡಿತನರಿ ಬಂದು ಒದ್ದಲಯ್ಯಯ್ಯೋ"[4]

ಕೌಟುಂಬಿಕ ವಲಯದಲ್ಲಿ ಗಂಡ, ಅತ್ತೆಯ ಮನೆಯವರು ಹೇಗೆ ಹಿಂಸೆಯನ್ನು ಹೆಣ್ಣಿಗೆ ನೀಡುತ್ತಿದ್ದರು. ಅಲ್ಲದೆ ಸಾಮಾಜಿಕವಾಗಿ ಹೆಣ್ಣಿನ ಪರಿಸ್ಥಿತಿಯು ಹೇಗಿತ್ತು ಎಂಬುದಾಗಿ ತಿಳಿಯಬಹುದಾಗಿದೆ.

ಸಾರಾ ಅಬೂಬಕ್ಕರ್‌ರವರು ಕೌಟುಂಬಿಕ ನೆಲೆಯಲ್ಲಿ ಹೆಣ್ಣು ಎದುರಿಸುವ ಸಮಸ್ಯೆಗಳನ್ನು ಮತ್ತು ಅದರ ವ್ಯಾಪಕತೆಯನ್ನು ತಮ್ಮ ಕಾದಂಬರಿಗಳಲ್ಲಿ ತಿಳಿಸುತ್ತಾರೆ. ಮಕ್ಕಳ ಹಕ್ಕು ತಂದೆಯದ್ದಾಗಿರುವುದರಿಂದ ತಾಯಿಯಿಂದ ಮಕ್ಕಳನ್ನು ಬೇರ್ಪಡಿಸುವುದು ಹೆಚ್ಚು. ಮಕ್ಕಳು ತಂದೆಗೆ ಸೇರಬೇಕಾದವರು ಎನ್ನುವ ವಿಚಾರವು ಧಾರ್ಮಿಕವಾಗಿ ಅಂಗೀಕೃತವಾದ ಹಕ್ಕು. ಈ ವ್ಯವಸ್ಥೆಯಲ್ಲಿ ಗಂಡು ಮಗುವಾದರೆ ಏಳು ವರ್ಷದವರೆಗೆ, ಹೆಣ್ಣು ಮಗುವಾದರೆ ಹದಿನಾಲ್ಕು ವರ್ಷಗಳವರೆಗೆ ತಾಯಿಯ ಬಳಿ ಇರಬಹುದು ಎಂಬುದಾಗಿ ಚಾಲ್ತಿಯಲ್ಲಿ ತರುವರು. ಕೌಟುಂಬಿಕವಾಗಿ ಬೆಳೆಯುವ ಧಾರ್ಮಿಕ ಹಾಗೂ ನೈತಿಕ ಭಾವನೆಗಳು ಅವರು ಪಾಲಿಸಬೇಕಾಗಿರುವ ಮೌಲ್ಯಗಳ ಹಾಗೂ ಕಾಲಕಾಲಕ್ಕೆ ಕುಟುಂಬದ ಸ್ವರೂಪದಲ್ಲಿ ತಲೆದೋರುವಂತಹ ಬದಲಾವಣೆಗಳಿಗೆ ತಕ್ಕಂತೆ ಹೊಂದಿಕೊಂಡು ಬದುಕುವ ಸ್ತ್ರೀಯರ ಪ್ರಜ್ಞೆ ಗುಣಗಳನ್ನು ಕೌಟುಂಬಿಕ ಚೌಕಟ್ಟಿನ ವ್ಯವಸ್ಥೆ ಒಳಗೊಂಡಿದೆ. ಇವೆಲ್ಲವೂ ಹೆಣ್ಣಿನ ಅಸ್ತಿತ್ವಕ್ಕೆ ಅವಶ್ಯವೆಂಬಂತೆ ಸಾರಾ ಅವರ ಕೃತಿಗಳಲ್ಲಿ ವಾಸ್ತವ ನೆಲೆಯಲ್ಲಿ ತೆರೆದಿಡುತ್ತದೆ. ಇಂತಹ ಸಾಂಪ್ರದಾಯಿಕ ಕುಟುಂಬದಲ್ಲಿ ತಮಗೆ ಬೇಕೆನಿಸಿದ್ದನ್ನು ಬೇಕಾದಂತೆ ಮಾಡುವ ಸ್ವಾತಂತ್ರ್ಯವು ಹೆಣ್ಣಿಗೆ ಲಭಿಸದೇ ಇರುವುದನ್ನು ಗುರುತಿಸಬಹುದಾಗಿದೆ.

'ಚಂದ್ರಗಿರಿ ತೀರದಲ್ಲಿ' ನಾದಿರಾ ತನ್ನ ಕುಟುಂಬ ವಲಯದಲ್ಲಿ ವಿವಾಹವಾಗಿ ಹೋದ ಮನೆಯಲ್ಲಿ ಎಲ್ಲರ ಮನಸ್ಸನ್ನು ಗೆದ್ದು ಹಿತಮಿತ ಮನೆಯ ಆದಾಯವನ್ನು ಖರ್ಚು ಮಾಡುವುದನ್ನು ಕಂಡ ರಶೀದ್ ನಗತೊಡಗಿದ್ದನು. ಆಗ ಅವನ ತಾಯಿ "ಯಾಕೆ ನಗುತ್ತಿ? ಕೇಳಿಲ್ಲಿ? ತನ್ನೆಲ್ಲ ಗೊಂದಲ, ಸಂಕಷ್ಟಗಳನ್ನು ಮರೆಯಲು ಗಂಡು ಬಯಸುವುದು ಹೆಣ್ಣಿನ ಸಹವಾಸವನ್ನು ಒಳ್ಳೆಯವನಾದರೆ ತನ್ನ ಹೆಂಡತಿಯ ಸಹವಾಸವನ್ನು ಬಯಸುತ್ತಾನೆ. ಆಕೆ ಮುಗುಳ್ನಗೆಯಿಂದ ಆತನನ್ನು ಸ್ವಾಗತಿಸಿದರೆ ಆತನಿಗದೇ ಸ್ವರ್ಗ. ಅದಕ್ಕಾಗಿ ಆಕೆಗೆ ಏನನ್ನು ನೀಡಲೂ ಆತ ಸಿದ್ದನೇ. ಆದರೆ ಹೆಂಡತಿ? ಆಕೆ ಕೇವಲ ಪತ್ನಿ ಮಾತ್ರವಲ್ಲ ತಾಯಿಯಾಗಲಿರುವವಳು. ಕುಟುಂಬದ ಪ್ರಧಾನ ಕಂಭ. ಅದು ಕೊಂಚ ಅಲುಗಿದರೂ ಸಂಸಾರದ ಭದ್ರತೆ ಕಮ್ಮಿಯಾದೀತು. ನಿನಗಾಗಿ ಬರಲಿರುವ ಪುಟ್ಟ ಅತಿಥಿಗಾಗಿ. ಈ ಮನೆಗಾಗಿ ಎಲ್ಲವನ್ನೂ ತ್ಯಾಗ ಮಾಡಲು ಆಕೆ ಸಿದ್ಧಳಾದರೆ ಮಾತ್ರ ಈ ಮನೆ, ಸಂಸಾರ ಉಳಿದೀತು. ಅಲ್ಲವಾ?"[5] ಎಂದು ತನ್ನ ಸೊಸೆಯ ಕುರಿತು ಆಡುವ ಮಾತುಗಳು ಕೌಟುಂಬಿಕ ವಲಯದಲ್ಲಿ ಹೆಣ್ಣಿನ ಪಾತ್ರವೆಂಬುದು ಎಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಎಂಬುದಾಗಿ ತಿಳಿದುಬರುತ್ತದೆ.

ಕೌಟುಂಬಿಕ ಚೌಕಟ್ಟಿನಲ್ಲಿ ಗಂಡು ಹೆಣ್ಣನ್ನು ನಿಯಂತ್ರಿಸಿದರೆ, ಮತ್ತೊಂದೆಡೆ ಹೆಣ್ಣು ಹೆಣ್ಣನ್ನು ನಿಯಂತ್ರಿಸುವುದು ಕಂಡುಬರುತ್ತದೆ. 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ನಾದಿರಾ ತಂಗಿ ಜಮೀಲಾ ಮದುವೆ ಆಗಿ ಗಂಡನ ಮನೆಗೆ ಹೋದಾಗ ಆಕೆಯ ಕೈಯಲ್ಲಿದ್ದ ಬಳೆಗಳನ್ನು ಕಸಿದುಕೊಂಡಿದ್ದಳು.

ಇದನ್ನು ಕಂಡ ನಾದಿರಾ ತನ್ನ ಅತ್ತೆಯ ಬಗೆಗೆ ತಾಳಿದ ನಿಲುವುಗಳನ್ನು ಗುರುತಿಸಬಹುದಾಗಿದೆ. ನಾದಿರಾ ಪಕ್ಕದ ಮನೆಯ ಹುಡುಗಿ ಕಾಲಿಗೆ ಬೆಳ್ಳಿಯ ಚೈನು ಹಾಕಿಕೊಂಡಿರುವುದನ್ನು ಕಂಡು ಚೆನ್ನಾಗಿರುವುದು ಎಂದು ವ್ಯಕ್ತಪಡಿಸಿದ್ದನ್ನು ಕಂಡ, ಆಕೆಯ ಮನದಿಂಗಿತವನ್ನು ತಿಳಿದ ಅತ್ತೆಯು ಮಗನಿಗೆ ಹೇಳಿ ಸೊಸೆಯ ಆಸೆಯನ್ನು ಪೂರೈಸಿದ ಬಗೆಯನ್ನು ತಿಳಿಯಬಹುದಾಗಿದೆ.

'ಸಹನಾ' ಕಾದಂಬರಿಯಲ್ಲಿ ನಸೀಮ ಮದುವೆಯಾಗಿ ಗಂಡನ ಮನೆಗೆ ಬಂದ ಮೇಲೆ ಬಂಧನದಲ್ಲಿದ್ದಂತೆ ಇದ್ದಳು. ಯಾವುದಕ್ಕೂ ಅತ್ತೆಯನ್ನು ಕೇಳಬೇಕು. ತಾನೇ ಅಡಿಗೆ ಮಾಡಿಟ್ಟರೂ ಬಡಿಸಿ ಉಣ್ಣುವ ಅಧಿಕಾರ ತನಗಿಲ್ಲ. ಎದುರಿಗೆ ವಿಶಾಲವಾದ ಮೈದಾನ ಕಾಣುತ್ತಿದ್ದರೂ, ಇಡೀ ದಿನ ದುಡಿದು ಬೇಸರವಾದಾಗ ಆ ಮೈದಾನದಲ್ಲೊಮ್ಮೆ ಕಾಲಾಡಿಸಿ ಹಾಯಾಗಿ ಓಡಾಡುವಂತಿಲ್ಲ. ಮುಸ್ಲಿಂ ಹೆಂಗಸರು ಹಾಗೆಲ್ಲ ಮನೆಯಿಂದ ಹೊರಗೆ ಓಡಾಡಬಾರದು. ಬೇರೆ ಗಂಡಸರೆದುರು ಕಾಣಿಸಿಕೊಳ್ಳಬಾರದು. ಹಾಗೆಲ್ಲ ಓಡಾಡಿದರೆ ಗೌರವವಿರುವುದಿಲ್ಲ ಎಂದು ಅವಳ ಅತ್ತೆ ಕಟ್ಟಪ್ಪಣೆ ಮಾಡಿದಳು. ಕೌಟುಂಬಿಕ ವಲಯದಲ್ಲಿ ತಾಯಿ-ಮಗಳ ಸಂಬಂಧವನ್ನು ಯಾರಿಂದಲೂ ಮುರಿಯಲು ಸಾಧ್ಯವಾಗದೇ ಇರುವಂತಹುದು. ಆದರೆ ಗಂಡ-ಹೆಂಡತಿ, ಅತ್ತೆ-ಸೊಸೆಯರ ಸಂಬಂಧ ಎಂಬುದು ಆಗಿರುವುದಿಲ್ಲ. ಅತೀ ಜಾಗರೂಕತೆಯಿಂದ ಹೆಣ್ಣು ಹೆಜ್ಜೆಯಿಡುವುದು ಅವಶ್ಯಕವಾಗಿರುತ್ತದೆ. ನಸೀಮಳ ತಾಯಿ ಬಂದು ಮಗಳನ್ನು ಕಳುಹಿಸಿಕೊಡಿ ಎಂದು ಕೇಳಿದ್ದಕ್ಕೆ ಮಗನು ಮನೆಯಲಿಲ್ಲ ಆತ ಬರಲಿ ಆತನನ್ನು ಕೇಳಿ ತಿಳಿಯಿಸುತ್ತೇನೆ ಎಂದು ಹೇಳಿದ್ದನ್ನು, ಪಾಷಾ ಬಂದಾಗ ನಸೀಮ ನಡೆದ ಸಂಗತಿಯನ್ನೆಲ್ಲ ವಿವರಿಸಿದಳು. ಅದಕ್ಕೆ ಪಾಷಾನು ತಾಯಿಯ ಬಳಿ ಬಂದು ಕೇಳಿದನು. ಆಗ ತಾಯಿ,- "ಏನೋ ನೀನು ಮನೆಯಲ್ಲಿರಲ್ಲಿಲ್ಲ, ನೀನು ಬಂದ ಮೇಲೆ ನಿನ್ನನ್ನು ಕೇಳಿ ಕರಕೊಂಡು ಹೋಗು ಎಂದೆ. ನಾನು ಅಷ್ಟು ಅಂದದ್ದಕ್ಕಾಗಿ ನಿನ್ನ ಹೆಂಡತಿ ನಿನ್ನೆ ಇಡೀ ದಿನ ಮುಖ ದಪ್ಪಗೆ ಮಾಡಿಕೊಂಡು, ರಾತ್ರಿ ಊಟವನ್ನೂ ಮಾಡದೆ ಮಲಗಿದಳು. ಹೆಂಗಸರಿಗೆ ಅಷ್ಟು ಹಟವಿರಬಾರದು. ಗಂಡನ ಮನೆಯಲ್ಲಿ ಎಲ್ಲರಿಗೂ ಹೊಂದಿಕೊಂಡು ಹೋಗಬೇಕು. ಆಗಲೇ ನಿನ್ನೊಡನೆ ಚಾಡಿ ಹೇಳಲು ಪ್ರಾರಂಭಿಸಿದಳೇ?"[6] ಎಂದು ಒರಟಾಗಿ ಕೇಳಿದಳು ಕತೀಜಮ್ಮ. ಕುಟುಂಬ ವಲಯದಲ್ಲಿ ಏನೇ ಘಟನೆ ಸಂಭವಿಸಿದರೂ ಹೆಣ್ಣು ಯಾರಿಗೂ ತಾನು ಅನುಭವಿಸುತ್ತಿರುವ ಶೋಷಣೆಯನ್ನು ಯಾರಿಗೂ ಹೇಳಬಾರದೆಂಬಂತಹ ನಿಯಮಗಳನ್ನು ಹೆಣ್ಣಿನ ಮೇಲೆ ಪರಂಪರೆಯ ಸಾಂಪ್ರದಾಯಿಕ ಹೆಸರಿನಲ್ಲಿ ವಿಧಿಸಿರುವುದನ್ನು ಗುರುತಿಸಬಹುದಾಗಿದೆ.

'ತಾಯ್ತನ' ಎಂಬುದು ಕೌಟುಂಬಿಕ ವಲಯದಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸಿರುವುದು. ಹದಿನಾಲ್ಕು ವರ್ಷ ತುಂಬುವುದಕ್ಕೆ ಮೊದಲೇ ದೇಹಕ್ಕೆ ಸರಿಯಾಗಿ ಆಹಾರವೂ ಇಲ್ಲದೆ, ದೇಹದ ಬೆಳವಣಿಗೆ ಪೂರ್ತಿಯಾಗುವುದಕ್ಕೆ ಮೊದಲು ವಿವಾಹ ಮಾಡಿ ಗರ್ಭಿಣಿಯಾಗಿ, ತನ್ನ ಹೊಟ್ಟೆಯಲ್ಲಿ ಮಗುವಿದೆ ಎಂದು ತಿಳಿಯದಷ್ಟೂ ಆಮಾಯಕಳಾಗಿ ಹೆಣ್ಣು ಇರುವುದು ಕಂಡುಬರುತ್ತದೆ. ನಸೀಮ ಗಂಡನ ಮೇಲೆ ಕೋಪ ಮಾಡಿಕೊಂಡಾಗ ತಾಯಿ ಸಕೀನ "ನಸೀಮ ಗಂಡನೊಡನೆ ಹಾಗೆಲ್ಲ ಸಿಟ್ಟುಮಾಡಿಕೊಳ್ಳಬಾರದು ಅವನ ಕೈಯಲ್ಲಿ ಹಣವಿದ್ದರೆ ಅವನು ತಂದುಕೊಡುವುದಿಲ್ಲವೇ? ಗಂಡನಿಗೆ ಬೇಸರವಾಗುವಂತೆ ವರ್ತಿಸಬಾರದು ಹೆಣ್ಣಿನ ಸ್ವರ್ಗವಿರುವುದು ಗಂಡನ ಕಾಲಡಿಯಲ್ಲಿ. ಹೆಣ್ಣಿಗೆ ಭೂಮಿಯಂತೆ ಸಹನೆಯಿರಬೇಕು. ಅನ್ನ, ಮೈ ಮುಚ್ಚಲು ಬಟ್ಟೆ ತಂದುಕೊಟ್ಟರೆ ಸಾಕು ಅದಕ್ಕಿಂತ ಹೆಚ್ಚಿಗೆ ಏನನ್ನೂ ಬಯಸಬಾರದು".[7] "ಹಾಗಾದರೆ ಹೆಣ್ಣು ಎಂದರೆ ಏನು? ಆಸೆ ಅಭಿಲಾಷೆಗಳೊಂದೂ ಇಲ್ಲದ ಭಾವರಹಿತವಾದ ಒಂದು ಪ್ರಾಣಿಯೇ? ಒಂದು ದುಡಿಯುವ ಎತ್ತೇ?"[8] ಎಂದೆಲ್ಲ- ತಾಯಿಯೊಡನೆ ಕೇಳಬೇಕೆಂಬ ಯೋಚನೆಯಾಯಿತು. ಆದರೆ ನಾಲಿಗೆಯ ತುದಿಗೆ ಬಂದ

ಮಾತುಗಳನ್ನು ಹಾಗೆಯೇ ನುಂಗಿಕೊಂಡಳು. ಅಂದರೆ ಹೆಣ್ಣು ಹೇಗೆ ವ್ಯಕ್ತಿತ್ವದ ಗುಣಗಳನ್ನು ಮರೆಮಾಚಿಕೊಂಡು ಬದುಕನ್ನು ಕುಟುಂಬ ವಲಯದಲ್ಲಿ ನಡೆಸುವಳು ಎಂಬುದಾಗಿ ಕಂಡುಬರುವುದು.

ವಿವಾಹವಾಗಿ ತನ್ನ ಮನೆಗೆ ಬಂದ ನಸೀಮಳ ಮೇಲೆ ಅತ್ತೆ ಕತೀಜಮ್ಮ ಪ್ರತಿಯೊಂದು ತೊಂದರೆಗಳಿಗೂ ಸೊಸೆಯನ್ನು ದೂಷಿಸುವುದು ಕಂಡುಬರುವುದು. "ಇವಳಿಂದಾಗಿಯೇ ಹೀಗೆಲ್ಲ ಆಯಿತು. ಇವಳು ಯಾವಾಗ ಈ ಮನೆಗೆ ಕಾಲಿಟ್ಟಳೋ ಅಂದಿನಿಂದ ಇಲ್ಲಿ ನೆಮ್ಮದಿಯೇ ಇಲ್ಲವಾಗಿದೆ. ಇವಳು ದುಡಿಯುತ್ತಾಳೆಂದೇ ಇವಳನ್ನು ತಂದು ನಿನಗೆ ಕಟ್ಟಿದೆ. ಈಗ ಇವಳು ದುಡಿಯುವುದು ಬಿಟ್ಟು ಇವಳಿಗಾಗಿಯೇ ನೀನು ದುಡಿದದ್ದೆಲ್ಲ ಖರ್ಚು ಮಾಡಬೇಕಾಯಿತು. ಎಂದು ಸೊಸೆಯ ಮೇಲೆ ಕೆಂಡ ಕಾರಿದಳು".[9] ಅತ್ತೆಯ ಆರೋಪವನ್ನು ಕೇಳಿ ಸೊಸೆಯ ಮನವು ಹಿಂಸಾತ್ಮಕವಾಗಿ ಸಿಲುಕಿರುವುದನ್ನು ಗುರುತಿಸಬಹುದಾಗಿದೆ. ಕುಟುಂಬ ವಲಯದಲ್ಲಿ ಬಂಧಿತಳಾಗಿ ದಬ್ಬಾಳಿಕೆಯನ್ನು, ಮಾನಸಿಕ ಹಿಂಸೆಯನ್ನು ಅನುಭವಿಸುತ್ತಾ ಆಕೆ ಗಂಡು ಹೇಳಿದ ಹಾಗೆ ಇತರ ಸದಸ್ಯರೊಂದಿಗೆ ಬದುಕನ್ನು ನಡೆಸುವುದು ಕಂಡುಬರುತ್ತದೆ.

'ವಜ್ರಗಳು' ಕಾದಂಬರಿಯಲ್ಲಿ ಹಲೀಮಳು ತನ್ನ ಮಗಳು ನಫೀಸಾಳು ಪರಂಪರೆಯ ಮಾದರಿಯಲ್ಲಿ ಹಳ್ಳಿಯ ಹುಡುಗನಿಗೆ ಮದುವೆಯನ್ನು ಮಾಡಿಕೊಡಲು ಇಷ್ಟವಿಲ್ಲದೆ ಆಧುನಿಕತೆಯಿಂದ ಕೂಡಿದ ಪಟ್ಟಣದ ಹುಡುಗನಿಗೆ ಮದುವೆಯನ್ನು ಮಾಡಿಕೊಡುವೆನು ಎಂಬಂತಹ ತೀರ್ಮಾನವನ್ನು ತಾಳಿರುತ್ತಾರೆ. ಮಗಳಿಗೆ ಪಟ್ಟಣದ ಹುಡುಗನಾದ ಬದ್ರುದ್ದೀನ್‌ಗೆ ಮದುವೆ ಮಾಡಿದರು. ಆದರ ಆತ ಹಳ್ಳಿಯ ಹುಡುಗಿಯೆಂದು ನಫೀಸಾಳನ್ನು ತಿರಸ್ಕಾರ ಮಾಡಿ ಆಕೆಯನ್ನು ಕೆಲವು ದಿನಗಳವರೆಗೆ ತವರು ಮನೆಗೆ ಕಳುಹಿಸಿದಾಗ ಆ ಸಮಾಜದಲ್ಲಿರುವ ಜನರು ಮಹಮ್ಮದ್ ಹಾಜಿಯವರ ಬಳಿ ಬಂದು, "ಏನು ಅಳಿಯನ ಮನೆಗೆ ಹೊರಟಿರಾ? ಮಗಳೆಲ್ಲಿದ್ದಾಳೆ?" ಎಂದು ಪರಿಚಯದವರಾರೊ ಕೇಳಿದಾಗ 'ಮಗಳು ನಮ್ಮ ಮನೆಯಲ್ಲಿದ್ದಾಳೆ"[10] ಎಂದು ತಗ್ಗು ದನಿಯಲ್ಲಿ ನುಡಿದರು. "ಅದೇನು ಹಾಜಿಯವರೇ, ಹೆರಿಗೆಗೆ ಬಂದವಳು ಗಂಡನ ಮನೆಗೆ ಹೋಗಿಯೇ ಇಲ್ಲವಂತೆ ಹೌದಾ?"[11] ಎಂದು ಇನ್ಯಾರೋ ಕೇಳಿದರು. "ಅಳಿಯ ಊರಲ್ಲಿಲ್ಲವಲ್ಲ? ಆತ ಬಂದ ಮೇಲೆ ಕಳಿಸುವಾ ಎಂದು ಅವಳ ತಾಯಿ ಹೇಳಿದಳು" ಎಂದು ಹೇಳಿ ಜಾರಿಕೊಂಡರು. ಮದುವೆಯಾದ ಮಗಳು ತವರು ಮನೆಯಲ್ಲಿದ್ದರೆ ಎಲ್ಲಾರಿಗೂ ಅಸಹಜವಾಗಿಯೇ ಕಾಣುತ್ತದಲ್ಲವೆ?[12] ಎಂದು ಪರಂಪರೆಯ ಹಿಂದಿರುವ ಸಂಪ್ರದಾಯದಿಂದ ಕೂಡಿದ ಮನಸ್ಥಿತಿಗಳ ಪ್ರಶ್ನೆಯನ್ನು ಮಾಡಿ ಕೇಳುತ್ತಾರೆಯೇ ಹೊರತು ಹೆಣ್ಣಿನ ಮನಸ್ಸಿನಲ್ಲಿ ಆಗುವ ತಳಮಳವನ್ನು ಅರಿಯುವಂತಹ ಮನಸ್ಸುಗಳು ಈ ಸಮಾಜದಲ್ಲಿ ಪರಂಪರೆಯ ಮೌಲ್ಯಗಳಿಂದ ಕೂಡಿದ ಮನಸ್ಥಿತಿಗಳು ತಿಳಿಯದೇ ಹೋದ ಸಂಗತಿಯು ಕಂಡುಬರುವುದು.

ಬದ್ರುದ್ದೀನ್‌ನು ಹೆಂಡತಿಯ ರೂಪವನ್ನು ಕಂಡು ಕುಟುಂಬದಲ್ಲಿ ಬೇಸರ ಪಟ್ಟು 'ನನಗೆ ಆ ಹೆಣ್ಣು ಬೇಡ' ಎಂಬ ಒಂದೇ ಹಟ ಆತನದು. ತಾಯಿ ಅಕ್ಕ, ತಂಗಿಯರೂ ಆತನ ಪಕ್ಷವೆ. "ಆ ಹಳ್ಳಿಯ ಹುಡುಗಿಯನ್ನು ನನ್ನ ಮಗನ ತಲೆಗೆ ಕಟ್ಟಿ ಆತನ ಬಾಳು ಹಾಳು ಮಾಡಿದಿರಿ' ಎಂದು ತಾಯಿ ತಂದೆಯನ್ನು ನಿಂದಿಸಿದಳು. 'ಒಂದು ಅಡಿಗೆ ಬರುತ್ತದೆಯೇ?' ಒಂದು ಸೀರೆಯನ್ನಾದರೂ ಸಮನಾಗಿ ಉಡಲು ಬರುತ್ತದೆಯೇ?"[13] ಎಂದು ಅಕ್ಕನೂ ದನಿಗೂಡಿಸಿದಳು. ಸಾಹೇಬರಿಗೆ ಕೋಪ ಬಂದು, 'ನೀವೆಲ್ಲ ಹೆಣ್ಣುಗಳಾಗಿಯೂ ಇನ್ನೊಂದು ಹೆಣ್ಣಿನ ಬದುಕನ್ನು ಮುರಿಯಲು ಹೊರಟದ್ದೀರಲ್ಲ? ನೀವೇನು ಮನುಷ್ಯರೋ? ಆ ಹುಡುಗಿಯಲ್ಲಿ ಏನು ಕೊರತೆ ಕಂಡಿರಿ? ಐದು ಹೊತ್ತು ನಮಾಜ್ ಮಾಡುವುದಿಲ್ಲವೇ? ತುಟಿ ಬಿಚ್ಚಿ ಜೋರಾಗಿ ಒಂದು ಮಾತಾದರೂ ಆಡಿದ್ದಾಳೆಯೇ? ಏನು ನಯ, ವಿನಯ? ಆ ಹುಡುಗಿಯನ್ನಿಟ್ಟುಕೊಳ್ಳಲು ನಿನ್ನ ಮಗ ಪುಣ್ಯ ಮಾಡಿರಬೇಕು'[14] ಎನ್ನುತ್ತಾ ತೋಟದ ಕಡೆಗೆ ನಡೆದರು.

ಹೆಣ್ಣಾಗಿ ಹುಟ್ಟಿ ಮತ್ತೊಬ್ಬ ಹೆಣ್ಣಿನ ಮೇಲೆ ಕೌಟುಂಬಿಕವಾಗಿ ಮಾನಸಿಕ ಹಿಂಸೆಯನ್ನು ನೀಡುತ್ತಾ, ಆಕೆಯನ್ನು ಪ್ರತಿಯೊಂದು ಸಣ್ಣ ವಿಷಯ ಸಿಕ್ಕಿದರೂ ಆಕೆಯನ್ನು ದೂಷಿಸುತ್ತಾ ಆಕೆಯ ಮನಸ್ಸಿಗೆ ನೋವನ್ನು ಉಂಟು ಮಾಡಿ ಬಂಧನದ ಚೌಕಟ್ಟಿನಲ್ಲಿಟ್ಟಿರುವುದು ಕಂಡುಬರುವುದು.

ಹಮೀದಳು ಗರ್ಭಿಣಿಯಾಗಿ ಹೆರಿಗೆ ನೋವು ಕಾಣಿಸಿಕೊಂಡಾಗ ಸೂಲಗಿತ್ತಿ ನಫೀಸಾಳನ್ನು ದೂರ ಕರೆದೊಯ್ದು ಆಕೆಯ ಕಿವಿಯಲ್ಲಿ ಪಿಸುಗುಟ್ಟಿದ್ದಳು. ಮಕ್ಕಳು ಎರಡಿವೆ. ಆದರೆ ಸುಲಭದಲ್ಲಿ ಹೆರಿಗೆಯಾಗುವಂತೆ ಕಾಣುವುದಿಲ್ಲ. ಪಟ್ಟಣದಿಂದ 'ದಾಕತ್ತ'ರನ್ನು ಕರೆಸುವುದು ಉತ್ತಮ ಎಂದು ಹೇಳಿದಾಗ, ನಫೀಸಾಳ ಎದೆ ಕಂಪಿಸಿತು. ಕೂಡಲೇ ಹುಸೈನನಿಗೆ ಸುದ್ದಿ ಮುಟ್ಟಿಸಿದಳು. "ಹಮೀದಳಿಗೆ ಹೆರಿಗೆಯಾಗುವಂತೆ ಕಾಣುವುದಿಲ್ಲ. ಆಕೆಯನ್ನು ಪಟ್ಟಣದ ಆಸ್ಪತ್ರೆಗೆ ಕರೆದೊಯ್ಯೋಣ". ಎಂದಾಗ, ಹುಸೈನ್‌ನು "ಏನು? ಪಟ್ಟಣದ ಆಸ್ಪತ್ರೆಯೇ? ನೂರಾರು ಜನ ಗಂಡಸರು ಓಡಾಡುವ ಕಡೆಗೆ ಅವಳನ್ನು ಕರೆದೊಯ್ಯುವುದೇ? ಏನು ಬೇಡ. ಕೊಂಚ ಹೊತ್ತಾದ ಬಳಿಕ ಹೆರಿಗೆಯಾಗುತ್ತದೇ"[15] ಎಂದು ಸಿಡುಕುತ್ತಾ ಆತನು ಹೋದ ಬಗೆಯಲ್ಲಿ ಪರಂಪರೆಯಿಂದ ನೋಡುವ ದೃಷ್ಟಿಕೋನವು ವ್ಯಕ್ತವಾಗುವುದು.

ಕೌಟುಂಬಿಕ ಚೌಕಟ್ಟು ಎಂಬುದು ಗಂಡು-ಹೆಣ್ಣಿನ ಸಂಬಂಧದ ವಿವಿಧ ಪದರುಗಳ ಚಿತ್ರಣವನ್ನು ನೀಡುವುದು. ಹೆಣ್ಣು ಹೇಗೆ ಕುಟುಂಬದ ವ್ಯವಸ್ಥೆಯಲ್ಲಿ ಉಳಿದು ಆಕೆ ಗಂಡಿನ ನಿಯಂತ್ರಣದ ಬಂಧನದ ಚೌಕಟ್ಟಿನಿಂದ ಹಿಂಸೆಯನ್ನು ಅನುಭವಿಸುತ್ತಿರುವಳು. ಜೊತೆಗೆ ಹೆಣ್ಣಿನ ಸ್ಥಾನಮಾನವು ಎಷ್ಟರ ಮಟ್ಟಿಗೆ ಇದೆ ಎಂಬುದಾಗಿ ತಿಳಿಯಬಹುದಾಗಿದೆ.

## 2. ಆರ್ಥಿಕ ಸ್ಥಿತಿಗತಿ:

ಪ್ರೊ. ಮ್ಯಾಡಿಸನ್‌ರವರ ಅಭಿಪ್ರಾಯದಲ್ಲಿ "ಆದಾಯ ಮಟ್ಟದಲ್ಲಿನ ಏರಿಕೆಯನ್ನು ಶ್ರೀಮಂತ ರಾಷ್ಟ್ರಗಳಲ್ಲಿ ಆರ್ಥಿಕ ಬೆಳವಣಿಗೆ ಎಂದೂ ಮತ್ತು ಬಡರಾಷ್ಟ್ರಗಳಲ್ಲಿ ಆರ್ಥಿಕತೆ"[16] ಎಂದು ಕರೆಯುವರು. ಕುಟುಂಬ ನಿರ್ವಹಣೆಯೆಂಬುದು ಸಮತಲವಾಗಿ ಸಾಗಬೇಕಾದರೆ ಗಂಡು-ಹೆಣ್ಣಿನ ಪಾತ್ರವು ಮುಖ್ಯವಾಗುತ್ತದೆ. ಗಂಡು ಹೊರಗಿನ ವ್ಯಾಪಾರದ ವಹಿವಾಟುಗಳ ಕಾರ್ಯವನ್ನು ನಿರ್ವಹಿಸಿದರೆ ಹೆಣ್ಣು ಮನೆಯ ಕೆಲಸಗಳನ್ನು ಪೂರ್ಣಗೊಳಿಸಿ ನಂತರ ತನ್ನ ಸಮುದಾಯದಲ್ಲಿ ಹೆಣ್ಣು ಪರಾಂಪರಿಕವಾಗಿ ಕಲಿತ ಗೃಹ ಕಸುಬುಗಳ ಕಾರ್ಯವನ್ನು ಮಾಡಿ ತಾನು ಇದ್ದ ಮನೆಗೂ ತಾನು ಹೋದ ಮನೆಯಲ್ಲೂ ದುಡಿಯುತ್ತಾ ತನ್ನ ದುಡಿಮೆಯಿಂದ ಬಂದ ಹಣವನ್ನು ಸಂಪೂರ್ಣವಾಗಿ ಕೊಟ್ಟು ಬದುಕಿನ ಉದ್ದಕ್ಕೂ ಬೇರೆಯವರ ಅಧೀನತೆಯಲ್ಲಿ ತನ್ನ ಇರುವಿಕೆಯನ್ನು ಕಟ್ಟಿಕೊಂಡು ಬದುಕನ್ನು ನಡೆಸುವುದು ಕಂಡುಬರುವುದು.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಫಾತಿಮ್ಮ ರಾತ್ರಿ ಹಗಲುಗಳೆನ್ನದೆ ದುಡಿಯುತ್ತಾ ಕಷ್ಟ ಪಡುವುದರಿಂದ ಹೇಗೋ ಸಂಸಾರಸಾಗುತ್ತಿತ್ತು. ಅಲ್ಲದೆ ಈಗ ಚಿಕ್ಕ ಮಗಳು ಜಮೀಲ ಬೀಡಿಕಟ್ಟಲು ಕಲಿತಿದ್ದಳು. ಬೀಡಿಗೆ ಬೇಕಾದ ಸಾಮಾನುಗಳನ್ನು ಅಂಗಡಿಯಿಂದ ತರುವುದೂ, ಕಟ್ಟಿದ ಬೀಡಿಗಳನ್ನು ಅಂಗಡಿಗೆ ತಲುಪಿಸುವುದೂ ಅದರ ಹಣ ವಸೂಲಿ ಮಾಡಿಕೊಂಡು ಮನೆಗೆ ಬೇಕಾದ ಸಾಮಾನುಗಳನ್ನು ತರುವುದು ಮಹಮ್ಮದ್ ಖಾನರ ಕೆಲಸ. ಈ ರೀತಿಯಲ್ಲಿ ಕುಟುಂಬ ನಿರ್ವಹಣೆಯ ಆದಾಯ ಬಗೆಯು ಕಂಡುಬರುವುದು.

ನಾದಿರಾ ಮದುವೆಯಾಗಿ ಗಂಡನ ಮನೆಗೆ ಹೋದಾಗ ಅಲ್ಲಿಯ ಪರಿಸರಕ್ಕೆ ಹೊಂದಿಕೊಂಡು ಬದುಕನ್ನು ನಡೆಸುತ್ತಿರಬೇಕಾದರೆ ತಂದೆಯ ಪ್ರತಿಷ್ಠೆಗೆ ಸಿಲುಕಿ ತನ್ನ ಬದುಕನ್ನು ತವರು ಮನೆಯಲ್ಲಿ ಕಳೆಯುವ ಆಕೆಗೆ ಬೇಸರವಾಗುತ್ತಾ ಹಗಲಿರುಳೆಲ್ಲವೂ ತನ್ನ ಗಂಡನ ಬರವಿಗಾಗಿ, ಅತ್ತೆಯ ಬರವಿಗಾಗಿ ಕಾದೇ ಕಾದಳು. ಗಂಟೆಗಳನ್ನು ಲೆಕ್ಕ ಮಾಡುತ್ತಾ ಕಳೆಯುತ್ತಿದ್ದಳು. ಹೊತ್ತು ಕಳೆಯಲು ತಂಗಿಯ ಜೊತೆ ಕುಳಿತು ಬೀಡಿಕಟ್ಟಲು ಕಲಿತಳು. ತಾನೂ ಬೀಡಿ ಕಟ್ಟ ತೊಡಗಿದಳು. ಇದರಿಂದ ಮನೆಯ ವರಮಾನ ಕೊಂಚ ಹೆಚ್ಚಿತ್ತು. ಮಹಮ್ಮದ್ ಖಾನ್ ಒಳಗೊಳಗೆ ಸಂತೋಷಪಟ್ಟರು. ಬೀಡಿ ಎಲೆ ಮತ್ತು ಸೊಪ್ಪನ್ನು ತಂದು ಜಮೀಲೆಯ ಕೈಯಲ್ಲಿಡುತ್ತಾ "ಹೇಗೂ ಈಗ ನೀವಿಬ್ಬರಿದ್ದೀರಲ್ಲಾ? ಎಲೆ ಸೊಪ್ಪುಗಳನ್ನು ಕೊಂಚ ಜಾಸ್ತಿಯೇ ತಂದಿದ್ದೇನೆ. ಇಬ್ಬರೂ ಸೇರಿಕೊಂಡು ಆದಷ್ಟೂ ಹೆಚ್ಚು ಬೀಡಿ ಕಟ್ಟಿರಿ".[17] ಎಂದರು. ಹೊತ್ತು ಹೋಗಲೆಂದು ಪ್ರಾರಂಭಿಸಿದ ಕೆಲಸ ಬದುಕಿನ ಅಗತ್ಯತೆಯಾಯಿತು. ಮಗಳ ಮನಸ್ಸಿನಲ್ಲಿ ಆಗುತ್ತಿದ್ದಂತಹ ವೇದನೆಯನ್ನು ತಿಳಿಯದೆ ತಂದೆಯು ಮಗಳ ದುಡಿಮೆಯಿಂದ ಬಂದಂತಹ ಆದಾಯದ ಬಗೆಗೆ ತನ್ನ ಕುಟುಂಬ ನಿರ್ವಹಣೆ ಸುಧಾರಣೆಯ ಮಟ್ಟದಲ್ಲಿ ಸಾಗುತ್ತಿರುವುದನ್ನು ಗಮನಿಸಿ ಆಕೆಯನ್ನು ತವರು ಮನೆಯಲ್ಲಿ ಉಳಿಸಿಕೊಂಡು ಮಾನಸಿಕ ಹಿಂಸೆಗೆ ಕಾರಣಕರ್ತರಾಗಿರುವುದನ್ನು ಗುರುತಿಸಬಹುದಾಗಿದೆ.

ನಾದಿರಾ ಒಂದು ಮಗುವಿನ ತಾಯಿಯಾದರೂ ಆಕೆ ಬೀಡಿ ಕಟ್ಟುವುದನ್ನು ಕಡಿಮೆ ಮಾಡಿರಲಿಲ್ಲ. ತಾಯಿಯ ಮುಖವನ್ನು ಮಗು ಕಂಡ ತಕ್ಷಣ 'ಊಂ ಆಂ' ಎಂದು ಏನನ್ನು ಹೇಳಲು ಪ್ರಯತ್ನಿಸಿದಾಗ ತಾಯಿ 'ಛೀ, ಕಳ್ಳ. ಬೀಡಿಕಟ್ಟದಿದ್ದರೆ ನಮಗೆ ಊಟ ಹಾಕುವವರು ಯಾರು? ಎನ್ನುತ್ತಾ ಆಕೆ ಸೂಪನ್ನು ಕೆಳಗಿಟ್ಟು ಮಗುವನ್ನು ಮಡಿಲಲ್ಲಿ ಮಲಗಿಸಿ ಹಾಲೂಡುವಳು'.[18] ಆರ್ಥಿಕವಾಗಿ ತಾನು ದುಡಿಮೆಯನ್ನು ಮಾಡದೇ ತನಗೆ ಯಾವ ರೀತಿಯ ಸವಲತ್ತುಗಳನ್ನು ತನ್ನ ತವರು ಮನೆಯಲ್ಲಿ ಸಿಗುವುದಿಲ್ಲ ಎಂಬುದನ್ನು ಅರಿತ ನಾದಿರಾ ಆ ಸಮುದಾಯದ ಇತರ ಹೆಂಗಸರು ಕೆಲಸವನ್ನು ಮಾಡುವ ಹಾಗೆ ತಾನು ಸಹ ಬದುಕನ್ನು ಸಾಗಿಸುತ್ತಿರುವುದು ಕಂಡುಬರುವುದು. ಮುಸ್ಲಿಂ ಸಮುದಾಯದ ಹೆಣ್ಣು ಕುಟುಂಬ ನಿರ್ವಹಣೆ ಮಾಡಲು ಬೀಡಿ ಕಟ್ಟುವ ಕೆಲಸವನ್ನು ನಿರ್ವಹಿಸುವುದರ ಜೊತೆಗೆ ಮನೆಯ ಖರ್ಚಿನಲ್ಲಿ ಹಿತಮಿತವಾಗಿ ದುಂದುವೆಚ್ಚ ಮಾಡುವುದನ್ನು ಕಡಿಮೆ ಮಾಡುವುದು ಕಂಡುಬರುತ್ತದೆ.

ನಾದಿರಾ ಏಳು ತಿಂಗಳ ಗರ್ಭಿಣಿಯಾಗಿದ್ದಳು. ಹಬ್ಬ ಕಳೆದ ಮೇಲೆ ಹೆರಿಗೆಗಾಗಿ ಊರಿಗೆ ಹೋಗಬಹುದೆಂದು ನಾದಿರಾ ಕಾವಳ್ಳಿಯಲ್ಲೇ ಉಳಿದಿದ್ದಳು. ಹಬ್ಬದ ದಿನ ರಶೀದ್ ಆಕೆಗೆ ಉತ್ತಮವಾದ ಸೀರೆಯೊಂದನ್ನು ತಂದಿದ್ದನು. ಆದರೆ ನಾದಿರಾಳಿಗೇಕೋ ಗಂಡನ ಈ ದುಂದುವೆಚ್ಚ ಅಷ್ಟೊಂದು ಇಷ್ಟವಾಗಿರಲಿಲ್ಲ. ಆಕೆ ಗಂಡನೊಡನೆ, "ಮೊನ್ನೆ ಸೀಮಂತಕ್ಕೆ ತಾನೇ ಬೆಲೆ ಬಾಳುವ ಸೀರೆ ತಂದಿರಲ್ಲ? ಈಗ ಪುನಃ ಇಷ್ಟು ಬೆಲೆಯ ಸೀರೆಯನ್ನೇಕೆ ತಂದಿರಿ? ಎಂದು ಗೊಣಗಿಕೊಂಡಳು. ರಶೀದ್ ತಾಯಿಯೊಡನೆ ದೂರಿದನು. "ಉಮ್ಮಾ, ಸೀರೆ ತಂದರೆ ಹೆಂಗಸರು ಯಾರಾದರೂ 'ಬೇಡ, ದುಂದುವೆಚ್ಚ ಅನ್ನುತ್ತಾರಾ? ನಿಮ್ಮ ಸೊಸೆ ನೋಡಿ, ಇಲ್ಲಿಗೊಣಗುತ್ತಾ ಇದ್ದಾಳೆ. 'ಯಾಕೆ ಸೀರೆ ತಂದಿರಿ? ಅಂತ ಈ ಹೆಂಗಸರನ್ನು ಅರ್ಥ ಮಾಡಿಕೊಳ್ಳುವುದಕ್ಕೆ ನನ್ನಿಂದ ಸಾಧ್ಯವಿಲ್ಲ ನನ್ನ ಪಕ್ಕದಂಗಡಿಯ ಹಸ್ಸನ್ ಹೇಳುತ್ತಿದ್ದ ತನ್ನ ಹೆಂಡತಿಗೆ ಎಷ್ಟು ಸೀರೆ ತಂದುಕೊಟ್ಟರೂ ತೃಪ್ತಿ ಎಂಬುದಿಲ್ಲ ಅಂತ ಇಲ್ಲಿ ನೋಡಿದರೆ ಇವಳಿಗೆ ಸೀರೆ ಜಾಸ್ತಿಯಾಯಿತಂತೆ!"[19] ಎಂದನು. ಆಮೀನಮ್ಮಾ ನಗುತ್ತಾ, 'ಹಾಗೇ ಮಗು, ಸಂಸಾರ ಭದ್ರವಾಗಿರಬೇಕಾದರೆ ಹೆಂಗಸರು ಕೈ ಬಿಗಿ ಹಿಡಿಯಬೇಕು. ಗಂಡಸರಿಗೇನು? ಕೈಯಲ್ಲಿ ಹಣವಿದ್ದರೆ ಹೇಗೆ ಬೇಕಾದರೂ ಖರ್ಚು ಮಾಡಿ ಬಿಡುತ್ತಾರೆ! ಹೆಣ್ಣಿನ ಕಡೆಗಣ್ಣ ನೋಟಕ್ಕೆ ಮತ್ತು ಒಲಿಸುವ ಮಂದಹಾಸಕ್ಕೆ ಮರುಳಾಗಿ ರಾಜ್ಯವನ್ನೇ

ಕಳೆದುಕೊಂಡ ರಾಜರಿಲ್ಲವೇ?....[20] ಎಂದು ಅತ್ತೆಯು ಕುಟುಂಬದ ಆರ್ಥಿಕ ಸ್ಥಿತಿಗತಿಯಲ್ಲಿ ಹೆಣ್ಣಿನ ಬುದ್ಧಿವಂತಿಕೆ, ಹಿತ–ಮಿತ ವ್ಯಯದ ಬಗ್ಗೆ ಹೇಳುವುದನ್ನು ಗುರುತಿಸಬಹುದಾಗಿದೆ.

ಜಮೀಲಾ ಮದುವೆಯಾಗಿ ವಿವಾಹದ ಬಗೆ ಬೇಸರವನ್ನು ತಾಳುತ್ತಾ ತನ್ನ ಮನದ ನೋವಿನ ಛಾಯೆಯನ್ನು ಹೇಗೆ ವ್ಯಕ್ತ ಪಡಿಸುವಳು. "ಸುಖ ಅಂದರೇನು ಅಕ್ಕಾ?" ಎಂದು ನೀರಸವಾಗಿ ನಗುತ್ತಾ "ನಾನು ಬೀಡಿ ಕಟ್ಟಿದ್ದರೆ ಅಲ್ಲೂ ಹೊಟ್ಟೆ ತುಂಬುತ್ತದೆ. ಇಲ್ಲೂ ಹೊಟ್ಟೆ ತುಂಬುತ್ತದೆ. ಅಲ್ಲಿ ಬೀಡಿಯ ಜೊತೆಯಲ್ಲಿ ಮನೆ ಕೆಲಸವನ್ನು ಮಾಡಬೇಕಾಗುತ್ತದೆ. ಇಲ್ಲಿ ಅದಿಲ್ಲವಲ್ಲ? ಪಾಪ, ಉಮ್ಮಾ ತಾನೇ ಕಷ್ಟ ಪಟ್ಟರೂ ನಮ್ಮಿಂದ ಮನೆಕೆಲಸ ಮಾಡಿಸುತ್ತಿರಲ್ಲಿಲ್ಲವಲ್ಲ?"[21] ಎಂದು ಹೇಳುವಳು. ಆರ್ಥಿಕವಾಗಿ ದುಡಿಮೆಯನ್ನು ಮಾಡಬೇಕಾದರೆ ಬೀಡಿಕಟ್ಟುವ ಕೆಲಸ ಮಾತ್ರವಲ್ಲದೇ ಬಾಣಂತಿ ಕೆಲಸ, ಪ್ರಾಣಿ ಸಾಕಾಣಿಕೆ ಎಂಬುದು ಸಹ ಇರುವುದನ್ನು ಗಮನಿಸಬಹುದಾಗಿದೆ.

'ಸಹನಾ' ಕಾದಂಬರಿಯಲ್ಲಿ ಸಕೀನಳಿಗೆ ಮನೆಯ ನಿರ್ವಹಣೆ ಮಾಡಲು ಬಾಣಂತಿ ಕೆಲಸ ಕುರಿತು ಫಾತಜ್ಜಿಯು ಸಲಹೆಯನ್ನು ನೀಡುವಳು. 'ನೋಡಮ್ಮ ನಮ್ಮೂರಿನ ಶ್ರೀಮಂತರಿಗೆ ಕೆಲಸಕ್ಕೆ ಎಷ್ಟು ಜನರಿದ್ದರೂ ಸಾಲದು. ಮನೆಯಲ್ಲಿ ಯಾರಾದರೂ ಹಡೆದರೆ, ಆ ಬಾಣಂತಿ ಮತ್ತು ಮಗುವನ್ನು 40 ದಿನಗಳವರೆಗೆ ನೋಡಿಕೊಳ್ಳಲು ರಾತ್ರಿಯೆಲ್ಲ ಮಗುವಿನ ತೊಟ್ಟಿಲು ತೂಗಲು ಒಂದು ಹೆಂಗಸನ್ನಿಟ್ಟುಕೊಳ್ಳುತ್ತಾರೆ ಎಂದು ನಿನಗೆ ಗೊತ್ತಲ್ಲ? ಈ ಕೆಲಸ ಮಾಡುವ ಹೆಂಗಸರಿಗೆ ತುಂಬ ಬೇಡಿಕೆ ಇದೆ. ಇಂತಹ ಕೆಲಸ ಮಾಡುವ ಹೆಂಗಸರು ತುಂಬ ಕಮ್ಮಿ. ಒಂದೆರಡು ಕಡೆ ಮಾಡಿ ಅಭ್ಯಾಸವಾದರೆ ಆಮೇಲೆ ಆ ಕೆಲಸ ಕಷ್ಟವೆನಿಸುವುದಿಲ್ಲ. ಎಲ್ಲ ಕಡೆ ಒಳ್ಳೆಯವಳು ಎಂಬ ಹೆಸರು ಪಡೆದರೆ ಮುಂದೆ ನಿನಗೆ ವಿಶ್ರಾಂತಿಯೇ ಇರದಷ್ಟು ಕೆಲಸ ಸಿಗುತ್ತದೆ. ಈ ಶ್ರೀಮಂತರ ಹೆಂಗಸರು ನಿನ್ನನ್ನೇ ಹುಡುಕಿಕೊಂಡು ಬರುತ್ತಾರೆ. ಮುಂದೆ ನೀನು ಮತ್ತು ನಿನ್ನ ಮಗಳು ಸುಖವಾಗಿ ಬದುಕಬಹುದು. ಮಗಳ ಮದುವೆಗೆ ಹಣವನ್ನು ಕೂಡಿಸಬಹುದು ಏನನ್ನುತ್ತೀಯಾ?[22] ಎಂದು ಫಾತಜ್ಜಿ ಆದಾಯದ ಬಗೆಗೆ ಸಲಹೆಯನ್ನು ನೀಡಿ ಕುಟುಂಬ ನಿರ್ವಹಣೆಯನ್ನು ಸರಾಗವಾಗಿ ಮುನ್ನೆಡಸಲು ಹೇಳುವ ಬಗೆಯನ್ನು ಗಮನಿಸಬಹುದಾಗಿದೆ.

ನಸೀಮ ಶಾಲೆಗೆ ಹೋಗಿ ವಿದ್ಯೆಯನ್ನು ಕಲಿಯಬೇಕೆಂದು ತನ್ನ ಮನದ ಆಸೆಯನ್ನು ವ್ಯಕ್ತಪಡಿಸಿದಾಗ ತಾಯಿ ಸಕೀನ ಮಗಳೊಡನೆ, "ನಸೀಮ, ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳು ಇಷ್ಟು ದೊಡ್ಡವರಾದ ಮೇಲೆ ಇನ್ನು ಬೀದಿಯಲ್ಲಿ ತಿರುಗಬಾರದು. ಮನೆಯಲ್ಲೇ ಇದ್ದು ಏನಾದರೂ ಕೆಲಸ ಕಲಿತುಕೊಳ್ಳಬೇಕು. ನೀನು ಶಾಲೆಗೆ ಹೊದದ್ದು ಸಾಕು. ನಮ್ಮಂತಹವರೆಲ್ಲಾ ಓದಿ ಏನು ಮಾಡಬೇಕಾಗಿದೆ? ನಾವೇನು ಸರಕಾರಿ ಕೆಲಸಕ್ಕೆ ಹೋಗುತ್ತೇವೆಯೇ? ಓದಲು, ಬರೆಯಲು ಕಲಿತರೆ ಧಾರಾಳ ಸಾಕು. ಆಮೇಲೆ ಮನೆಯ ಸೀತಮ್ಮನ ಮಗಳು ಸರೋಜ ಬೀಡಿ ಕಟ್ಟುತ್ತಿದ್ದಾಳಲ್ಲ? ಅವಳ ಜೊತೆ ಸೇರಿಕೊಂಡು ಬೀಡಿ ಕಟ್ಟುವುದನ್ನು ಕಲಿತುಕೊ ನಾಲ್ಕು ಕಾಸಿನ ಸಂಪಾದನೆಯಾಗುತ್ತದೆ".[23] ಎಂದು ತಮ್ಮ ಮನೆಯ ಸ್ಥಿತಿಯು ಸುಧಾರಿಸುವುದು ಎಂಬುದಾಗಿ ತಿಳಿಸಿದಳು. ನಸೀಮಳ ಆರೋಗ್ಯ ಸ್ಥಿತಿಯು ಹದಗೆಟ್ಟಾಗ ಬೀಡಿಕಟ್ಟುವುದನ್ನು ಸಂಪೂರ್ಣ ನಿಲ್ಲಿಸಿದ್ದಳು. ಒಮ್ಮೆ ತಂದ ಎಲೆಯನ್ನು ಮೂರು ನಾಲ್ಕು ದಿನಗಳಾದರೂ ಮುಗಿಸಲಾಗದೆ ಕೊನೆಗೆ ಪ್ರಯಾಸಪಟ್ಟು ಬೀಡಿ ಕಟ್ಟಿ ಮುಗಿಸಿ ಅಂಗಡಿಗೆ ಕಳುಹಿಸಿದಾಗ ಅಂಗಡಿಗೆ ಕಳುಹಿಸಿದಾಗ ಅಂಗಡಿಯಾತನು ಚೆನ್ನಾಗಿ ಬೈದನೆಂದು ಅದನ್ನು ತೆಗೆದುಕೊಂಡು ಹೋದ ಹುಡುಗನು ಹೇಳಿದ್ದನು. ಆಮೇಲೆ ಆಕೆ ಬೀಡಿಯ ಕೆಲಸವನ್ನು ಸಂಪೂರ್ಣ ನಿಲ್ಲಿಸಿದ್ದಳು. ಆದ್ದರಿಂದ ಅತ್ತೆ ಮತ್ತು ಗಂಡನ ದ್ವೇಷವನ್ನು ಕಟ್ಟಿಕೊಂಡಳು. ಆರ್ಥಿಕವಾಗಿ

ಹೆಣ್ಣು ದುಡಿಮೆ ಮಾಡದೆ ಹೋದರೆ ಆಕೆ ಯಾವ ರೀತಿಯ ಸಂಕಷ್ಟಗಳಿಗೆ ಸಿಲುಕುವಳು ಎಂಬುದಾಗಿ ವ್ಯಕ್ತವಾಗುತ್ತದೆ.

'ವಜ್ರಗಳು' ಕಾದಂಬರಿಯಲ್ಲಿ ಬೇಸಾಯಗಾರರ ಮನೆಯಲ್ಲಿ ಗಂಡು ಮಗ ಹುಟ್ಟಿದರೆ ತಂದೆಗೆ ಇನ್ನೇರಡು ಕೈಗಳು ಬಂದಂತೆ. ಹತ್ತು ವರ್ಷಗಳಾಗುವ ಮೊದಲೇ ಹುಡುಗರನ್ನು ಗೊಬ್ಬರ ಹೊರುವುದಕ್ಕೊ, ಕಳೆ ಕೀಳುವುದಕ್ಕೂ ಉಪಯೋಗಿಸಿಕೊಳ್ಳುವುದು ರೂಢಿ. ಆದುದರಿಂದ ಶಫೀಯುಲ್ಲನನ್ನು ಸಹ ತಂದೆಯ ತೋಟದ ಕೆಲಸಕ್ಕೆ ನೆರವಾಗಬೇಕೆಂದು ಹೇಳುವನು. ನಫೀಸಾ ತನ್ನ ವೈವಾಹಿಕ ಬದುಕಿನಲ್ಲಿ ಹೊರಬಂದಾಗ ಅಣ್ಣನ ಮನೆಯಲ್ಲಿ ಬದುಕನ್ನು ನಡೆಸುತ್ತಿರಬೇಕಾದರೆ "ಅಣ್ಣ ನಿನಗೆ ನಾನೊಂದು ಹೊರೆಯೇ, ಆದರೆ ನನಗೆ ನೀನಲ್ಲದೆ ಇನ್ಯಾರಿದ್ದಾರೆ? ನಿನ್ನ ಹೊರೆಯನ್ನು ನಾನು ಆದಷ್ಟು ಕಮ್ಮಿ ಮಾಡಲು ಪ್ರಯತ್ನಿಸುತ್ತೇನೆ. ನನಗೊಂದೆರಡು ದನಗಳನ್ನು ತಂದುಕೊಡು ಅವುಗಳನ್ನು ಸಾಕಿಕೊಂಡು ದಿನ ನೂಕುತ್ತೇನೆ'.[24] ಎಂದು ಆದಾಯದ ಯೋಜನೆಯನ್ನು ತಿಳಿಸುವಳು.

ಹೀಗೆ ಆರ್ಥಿಕ ಸ್ಥಿತಿಗತಿಯೆಂಬುದು ಕುಟುಂಬ ವಲಯದಲ್ಲಿ ಪರಾಂಪರಿಕವಾಗಿ ಹೆಣ್ಣು ಹೇಗೆ ಆದಾಯದ ವಿವಿಧ ವಲಯದ ನೆಲೆಯಿಂದ ಕೆಲಸವನ್ನು ಮಾಡುತ್ತ ಬದುಕನ್ನು ನಡೆಸುವುದರ ಜೊತೆಗೆ ಆರ್ಥಿಕವಾಗಿ ಮನೆಯವರಿಗೆ ದುಡಿದು ಕೊಡದೆ ಹೋದರೆ ಕುಟುಂಬದವರ ಕೋಪಗಳಿಗೂ ಸಹ ಗುರಿಯಾಗಬೇಕಿತ್ತು. ದುಡಿಮೆ ಎಂಬುದು ಹೆಣ್ಣು ಮಕ್ಕಳಿಗೆ ಕಾಸರಗೋಡಿನ ಸಮುದಾಯದಲ್ಲಿ ಯಾವ ಬಗೆಯಲ್ಲಿ ಇತ್ತು ಎಂಬುದಾಗಿ ಸಾರಾ ಅವರ ಕಾದಂಬರಿಗಳಲ್ಲಿ ಗುರುತಿಸಬಹುದಾಗಿದೆ.

### 3. ಹೆಣ್ಣಿನ ಮೌನ ಪ್ರತಿಭಟನೆ:

ಸಾಮಾಜಿಕ ವ್ಯವಸ್ಥೆಯೊಳಗೇ ಇರುವ ವೈರುಧ್ಯಗಳಲ್ಲಿ ನಿಯಂತ್ರಕಗಳು ಇರುವಲ್ಲಿಯೇ ಮೀರುವಿಕೆಯೂ ಇರುತ್ತದೆ. ಆದರೆ ನಿಯಂತ್ರಕದ ಶಕ್ತಿಯನ್ನು ಕುಂದಿಸುವಲ್ಲಿ ಮೀರುವಿಕೆಯ ಶಕ್ತಿ ಪ್ರಬಲವಾಗಿರುತ್ತದೆ. ಇದು ಸಾಮಾಜಿಕ ವಾಸ್ತವವಾಗಿರುವುದು. ಇಲ್ಲಿ ನಿಯಂತ್ರಣದ ಜತೆ ಪ್ರತಿರೋಧವೂ ಉಂಟಾಗುತ್ತದೆ. ಬದಲಾಗುತ್ತಿರುವ ಸಾಮಾಜಿಕ ಸಂದರ್ಭಗಳು ಪ್ರತಿರೋಧಕ್ಕೆ ಹೆಚ್ಚಿನ ಶಕ್ತಿ ತುಂಬುತ್ತವೆ. ಮುಸ್ಲಿಂ ಸಮುದಾಯದಲ್ಲಿ ಧರ್ಮದ ನಿಯಂತ್ರಣವಿರುವಂತೆ, ಸಾಂಸ್ಕೃತಿಕ ವಾತಾವರಣದೊಳಗೆ ಪ್ರತಿರೋಧದ ನೆಲೆಗಳು ಇರುತ್ತವೆ. ಎಲ್ಲ ಆಧುನಿಕ ಸಾಮಾಜಿಕ ವ್ಯವಸ್ಥೆಯಲ್ಲಿರುವಂತೆ ಮುಸ್ಲಿಂ ಸಮುದಾಯ ಸಂರಚನೆಯಲ್ಲಿಯೂ ಮಹಿಳೆಯರ ಪ್ರತಿಭಟನೆಯ ಧ್ವನಿಗಳಿರುತ್ತವೆ. ಮಹಿಳೆಯರ ಬದುಕು ಧರ್ಮ ಕುಟುಂಬದೊಂದಿಗೆ ಬೆಸೆದುಕೊಂಡಿರುವುದು. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ನಲುಗುತ್ತಿರುವ ಸಂಗತಿಗಳನ್ನು ಗಮನಿಸಬಹುದಾಗಿದೆ. ಕಥೆ, ಕಾದಂಬರಿಗಳ ಮೂಲಕ ದುರ್ಬಲರ ಪರವಾದ ನಿಲುವುಗಳನ್ನು ಮೂಡುವುದು ಕಂಡುಬರುತ್ತದೆ.

'ಮಾತು ಬಾರದ ಹೆಣ್ಣು ಮಕ್ಕಳೆದುರು ಕುರಾನ್, ಹದೀಸ್ ಎಲ್ಲಾ ತನಗೆ ಬೇಕಾದ ಹಾಗೆ ತಿರುಚೋದು ನ್ಯಾಯ ಸಿಗೋದು ಯಾರಿಗೆ ಗೊತ್ತ? ಜುಟ್ಟು ಹಿಡಿದು ಕೇಳೋರಿಗೆ ಮಾತ್ರ'[25] ಎಂದು ಹೇಳುವ ಜುಲೇಖಾಳಂತಹ ಗಟ್ಟಿ ಮಹಿಳೆಯರಿದ್ದಾರೆ. ಹೆಣ್ಣಿನ ಪ್ರತಿಭಟನಾ ವಿಧಾನಗಳು ಹಲವಾರಿವೆ. ಅದು ಕೆಲವು ಸಲ ಸದ್ದು ಮಾಡಬಹುದು ಅಥವಾ ಮೌನವಾಗಿಯೇ ಪ್ರತಿಭಟಿಸಬಹುದು. ಧರ್ಮದ

ಹೆಸರಿನಲ್ಲಿ ಪುರುಷರು ಹೆಣ್ಣಿನ ಮೇಲೆ ನಡೆಸುವ ದಬ್ಬಾಳಿಕೆಯ ಬಗ್ಗೆ ಸಿಟ್ಟು ಮಾಡಿಕೊಳ್ಳುವ ಆಮೀನ ಆ ಸಿಟ್ಟನ್ನೆಲ್ಲಾ ಪಾತ್ರೆಗಳ ಮೇಲೆ ತೋರಿಸುವಳು. ಪಾತ್ರೆಗಳನ್ನು ಕುಕ್ಕುವುದು "ಇವ್ನಿಗೆ ಬೇಕಿದ್ರೆ ದೇವ್ರನ್ನು ಎಳೀತಾನೆ ಕುರಾನ್‌ಗೂ ತರ್ತಾನೆ ಹದೀಸ್‌ನೂ ಹೇಳ್ತಾನೆ ಪಾಪದವ್ಳಿಗೆ ಹೊಟ್ಟೆಗೆ ಹಿಟ್ಟುಕೊಡು ಅಂದ್ರೆ ಕಳ್ಳಾಟ ಆಡ್ತಾನೆ' ಎಂದು ಗೊಣಗುತ್ತಾಳೆ".[26] ಹೆಣ್ಣಿನ ಪ್ರತಿಭಟನೆ ಎಂಬುದು ಮೌನವಾಗಿ ಹಾಗೂ ತನ್ನ ಮನದಲ್ಲಿ ನಡೆಯುವ ತಳವಳವು ಸ್ಫೋಟಗೊಂಡು ಆಕೆ ಯಾವ ರೀತಿಯಲ್ಲಿ ಹೆಣ್ಣು ಪರಂಪರೆಯ ಮೌಲ್ಯಗಳನ್ನು ಮೀರಿ ಆಕೆಯು ಬದುಕನ್ನು ನಡೆಸುವ ಬಗೆಯು ಕಂಡುಬರುತ್ತದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಮಹಮ್ಮದ್ ಖಾನ್‌ರ ಮುಂಗೋಪ ತಾಯಿ, ಮಕ್ಕಳಿಗೆಲ್ಲಾ ಚಿರಪರಿಚಿತ. ಮಕ್ಕಳಾದ ಮೇಲೆ ಮಕ್ಕಳನ್ನು ಹೊಡೆದು ಶಿಕ್ಷಿಸುತ್ತಿದ್ದರು. ಮಕ್ಕಳ ಎದುರಿನಲ್ಲಿ ಕೂಡಾ ಫಾತಿಮ್ಮಳಿಗೆ ಹೊಡೆತ ಬೀಳುವುದಿತ್ತು. ಒಮ್ಮೆ ಫಾತಿಮ್ಮ ಗಂಡನ ಮಾತಿಗೆ ಏನೊ ಗೊಣಗಿದಾಗ ಕೂಡಲೇ ಆತನ ಬಲಗೈ ಆಕೆಯ ಕೆನ್ನೆಯನ್ನಪ್ಪಳಿಸಿತ್ತು. ಕಿವಿಯಲ್ಲಿದ್ದ ಚಿನ್ನದ ಆಲಿಕತ್ತುಗಳು ನಜ್ಜುಗುಜ್ಜಾಗಿದ್ದವು. ಫಾತಿಮ್ಮ ತಲೆ ತಿರುಗಿ ಜ್ಞಾನ ತಪ್ಪಿಬಿದ್ದಳು. ಮಕ್ಕಳಿಬ್ಬರೂ ಆಗ ಚಿಕ್ಕವರು. ಅವರು ದೂರ ನಿಂತು ಈ ದೃಶ್ಯವನ್ನು ನೋಡಿ ಭಯದಿಂದ ನಡುಗಿದರು. ಮುಂದೆ ತಂದೆಗೆ ಕೋಪ ಬಂದಿದೆಯೆಂದು ತಿಳಿದಾಗಲೆಲ್ಲ ಈ ಮಕ್ಕಳು ತಂದೆಯ ಕಣ್ಣೆದುರಿನಿಂದ ಮಾಯವಾಗಿ ನದೀ ತೀರದಲ್ಲೆಲ್ಲಾದರೂ ಅವಿತುಕೊಳ್ಳುತ್ತಿದ್ದರು. ತಂದೆಗೆ ಎದುರಾಡುವ ಪ್ರತಿಭಟಿಸುವ ಯೋಚನೆಯನ್ನು ಇವರು ಕನಸಿನಲ್ಲೂ ಮಾಡಲಾರದವರಾಗಿದ್ದರು. ಹೆಣ್ಣು ಗಂಡಿನ ಮಾತಿಗೆ ಮರೆತು ಕೂಡ ಎದುರು ಮಾತನಾಡುವಂತಿಲ್ಲ. ಪ್ರತಿಭಟಿಸುವ ಮನಸ್ಸನ್ನು ಪಡೆಯದೇ ಇರುವುದು ಪರಂಪರೆಯ ಹೆಣ್ಣು ಮಕ್ಕಳ ಸ್ಥಿತಿಯು ಕಂಡುಬರುವುದು.



ಫಾತಿಮ್ಮ ಎಂದು ತನ್ನ ಗಂಡನೊಡನೆ ತನ್ನ ಮಗಳ ಸ್ಥಿತಿಯನ್ನು ಕಂಡು "ಒಂದಲ್ಲ ಒಂದು ದಿನ ನೀವು ಅಳಿಯನೊಡನೆ ರಾಜಿ ಮಾಡಿಕೊಳ್ಳುತ್ತೀರಿ. ಮಗಳು ಸುಖವಾಗಿ ಗಂಡನ ಮನೆಗೆ ಹೋಗುತ್ತಾಳೆ ಎಂದೇ ನಾನು ಈವರೆಗೆ ಆಶಿಸಿದ್ದೆ, ನೀವು ಇಷ್ಟು ಹಟ ಮಾಡುವಿರೆಂದು ನಾನು ಊಹಿಸಿರಲಿಲ್ಲ. ಮಗುವನ್ನೆತ್ತಿಕೊಂಡು ಹೋದ ಮೇಲೆ ಅವರು ಅವಳನ್ನು ಕರೆಯಿಸಿಕೊಳ್ಳುತ್ತಾರೆಯೇ? ಮಗಳ ತಲೆಯ ಮೇಲೆ ನೀವೇ ಕಲ್ಲು ಹಾಕಿದಿರಲ್ಲ? ನಿಮ್ಮ ಮಗಳಾಗಿ ಹುಟ್ಟಿ ಅವಳು ಇನ್ನು ಏನೇನು ಸಂಕಷ್ಟ ಅನುಭವಿಸಬೇಕಾಗಿದೆಯೋ 'ಯಾ ಅಲ್ಲಾಹ್ ನನ್ನನ್ನೊಮ್ಮೆ ಕರೆದೊಯ್ಯಬಾರದೇ?"[27] ಎಂದು ಇಷ್ಟು ಮಾತನಾಡದ ಫಾತಿಮ್ಮ ಅಳುತ್ತಾ ಇಷ್ಟು ಹೇಳಿದಳು. ಬಾಯಿಗೆ ಮೌನ ಮುದ್ರೆಯೊತ್ತಲ್ಪಟ್ಟ ಹೆಣ್ಣು ಬೆನ್ನಿನ ಮೇಲೆ ಎಷ್ಟು ಏಟು ಬಿದ್ದರೂ 'ಹಾಂ ಹೊಂ' ಅನ್ನಲಾರಳಲ್ಲ? ಗಂಡನಿಂದ ಎಷ್ಟೇ ಅವಮಾನಿತಳಾದರೂ ಹೆಣ್ಣು ಎಲ್ಲವನ್ನೂ ಸಹಿಸಿಕೊಳ್ಳುತ್ತಾಳೆ. ಅವಳಿಗೆ ಊಟ, ಬಟ್ಟೆ ಆಶ್ರಯ ನೀಡುವವನು ಅವನು ತಾನೆ?[28] ಎಂದು ನಾದಿರಾಳು ಹೀಗೆ ಗಂಡಿನಿಂದ ನೋವನ್ನು ಅನುಭವಿಸಿದಾಗ ಆಕೆಯ ಮನದ ಮಾತುಗಳು ಹೊರ ಬರುವ ಬಗೆಯನ್ನು ಗಮನಿಸಬಹುದಾಗಿದೆ.

ಧರ್ಮದ ಸಂಕೇತವಾದ ಮಸೀದಿಯ ಕೊಳದ ಬಳಿ ಬಂದು ಒಂದು ಕ್ಷಣ ಆಕೆ ಕೊಳದ ನೀರನ್ನು ದಿಟ್ಟಿಸುತ್ತಾ "ಅಲ್ಲಾಹ್ ಕರುಣಿಸಿದರೆ ನಾವು ನ್ಯಾಯ ತೀರ್ಮಾನದ ದಿನ ಭೇಟಿಯಾಗೋಣ"[29] ಎನ್ನುತ್ತಾ ಕೊಳದಲ್ಲಿ ಧುಮುಕಿದಳು. ಕ್ಷಣ ಕಾಲ ಕೊಳದ ನೀರು ಅಲ್ಲೋಲ ಕಲ್ಲೋಲವಾಗಿ ಆಮೇಲೆ ಶಾಂತವಾಯಿತು. ನಾದಿರಾಳು ತನ್ನ ಪ್ರತಿಭಟನೆಯನ್ನು ಹೇಗೆ ಮೌನವಾಗಿ ಮಾಡಿದಳು ಎಂಬುದಾಗಿ ತಿಳಿಯಬಹುದಾಗಿದೆ.

'ಸಹನಾ' ಕಾದಂಬರಿಯಲ್ಲಿ ನಸೀಮ ಮದುವೆಯಾಗಿ ಗಂಡನ ಮನೆಗೆ ಹೋಗಿ ಕೆಲವು ತಿಂಗಳು ಆದ ಮೇಲೆ ತಾಯಿ ಸಕೀನ ಬಂದು ಮಗಳನ್ನು ಕರೆದೊಯ್ಯಬೇಕೆಂಬ ಮನದ ಇಂಗಿತವನ್ನು ಅತ್ತೆಗೆ ತಿಳಿಸಿದಾಗ ಆಕೆ ಕಳಿಸಲು ಒಪ್ಪುವುದಿಲ್ಲ. ಆಗ ನಸೀಮ ಮೊನ್ನೆ ಮೊನ್ನೆ ಕಂಡ ಈ ಅತ್ತೆಗೆ ಮಾತ್ರ ಎಲ್ಲ ಅಧಿಕಾರವೂ ಇರುವುದೇ?[30] ಎಂಬ ಮಾತುಗಳು ಆಕೆಯ ಮನದಲ್ಲಿ ದಂಗೆಯೇಳುವ ಬಗೆಯು ಕಂಡುಬರುವುದು. ನಸೀಮಳಿಗೆ ಬಾಲ್ಯದಿಂದಲೂ 3 ಆಸೆಗಳು ಇರುವುದು. ಅವುಗಳೆಂದರೆ ಮೊದಲನೆಯದು ತಾನು ಒಮ್ಮೆ ದೂರದಿಂದ ಕಂಡ ರೈಲುಗಾಡಿಯಲ್ಲಿ ಕುಳಿತು ಪ್ರಯಾಣ ಮಾಡಿ ಮಂಗಳೂರಿನ ಹತ್ತಿರದ ಉಳ್ಳಾಲದ ಸೈಯದ್ ಮದನಿಯವರ ದರ್ಗಕ್ಕೆ ಹೋಗಬೇಕು. ಎರಡನೆಯದು ತಾವೊಂದು ಆಡನ್ನು ಸಾಕಬೇಕು. ಅದರ ಹಾಲನ್ನು ತಾನೇ ಕರೆಯಬೇಕು. ಮೂರನೆಯದು ತನಗೊಂದು ಕೆಂಪು ರೇಶ್ಮೆಯ ಜರಿಯ ಹೂವಿನ ಲಂಗ ಹೊಲಿಸಬೇಕು. ಇವಿಷ್ಟು ಅವಳ ಆಸೆಗಳು. ಮದುವೆಯಾಗಿ ಹೋದರೆ ಬರುವ ಗಂಡನು ಆಸೆಗಳನ್ನು ಪೂರೈಸುತ್ತಾನೆ. ಎಂದು ತಾಯಿ ಹೇಳಿದ ಮಾತುಗಳು ನೆನಪಾದವು. ಅಲ್ಲದೆ ನಸೀಮ ಬೀಡಿಕಟ್ಟುತ್ತಾ ತನ್ನ ದುಡಿಮೆಯಿಂದ ಬಂದ ಹಣವು ತನಗೆ ದಕ್ಕದೇ ಹೋದಾಗ "ನಾನು ಬೀಡಿ ಕಟ್ಟಿದ ಹಣವೆಲ್ಲಾ ನಿಮ್ಮ ತಾಯಿಯ ಬಳಿಯಿದೆ. ಆ ಹಣದಲ್ಲಿ ಸ್ವಲ್ಪ ಸೇರಿಸಿ ನನಗೊಂದು ಜರಿಸೀರೆ ತರಬಹುದಿತ್ತಲ್ಲ?"[31] ಎಂದು ಅವಳು ಗಂಡನನ್ನು ಮೊದಲ ಬಾರಿಗೆ ದೂರಿದಳು. ಎಂಬ ಬಗೆಯು ಕಂಡುಬರುತ್ತದೆ. "ಗಂಡಸರು ಎಷ್ಟೊಂದು ನಿರ್ದಯಿಗಳು. ಇವರು ಯಾಕೆ ಹೆಂಗಸರನ್ನು ಕೊಂಚವಾದರೂ ಅರ್ಥಮಾಡಿಕೊಳ್ಳಲು ಪ್ರಯತ್ನಿಸುವುದಿಲ್ಲ". ಎಂದು ಆಕೆ ಮನದಲ್ಲೇ ಅಂದುಕೊಂಡ ಬಗೆಯನ್ನು ಗುರುತಿಸಬಹುದಾಗಿದೆ. ರಶೀದ್‌ನಿಂದ ದೂರವಾದ ಮೇಲೆ ನಸೀಮ ತನ್ನ ನೋವನ್ನು ಮಗಳ ಮುಂದೆ ಹೇಳುತ್ತಾ "ನನ್ನ ಪಾಲಿಗೆ ಅವರು ಎಂದೋ ಸತ್ತಿದ್ದಾರೆ? ನಾನು ರೋಗಿಯೆಂದು ಅವರಿಗೆ ಹೆಣ್ಣಿನ ಸಂಪರ್ಕ ಬೇಕೆಂದು ಅವರು ಇನ್ನೊಬ್ಬಳನ್ನು ಮನೆಗೆ ತಂದರಲ್ಲ. ಆ ರಾತ್ರಿಯೇ ನಾನವರನ್ನು ಗೋರಿಯಲ್ಲಿಟ್ಟೆ! ಎಂದು ಉದ್ವಿಗ್ನಳಾಗಿ ನುಡಿದು, 'ಹೂಂ ಬೇಗ ಊಟಮಾಡು'[32] ಎಂದು ಮಗಳ ಬೆನ್ನಿಗೆ ಗುದ್ದಿದಳು. ರೋಸಿ ಜೋರಾಗಿ ಕಿರುಚಿಕೊಂಡು ಅಳತೊಡಗಿದಳು. "ನಿನ್ನ ಗಂಡನ ಮೇಲಿನ ಸಿಟ್ಟನ್ನು ಮಗುವಿನ ಮೇಲೆ ಯಾಕೆ ತೋರಿಸುತ್ತೀಯಾ?"[33] ಎಂದು ಸಕೀನ ಓಡಿ ಬಂದು ಮಗಳನ್ನು ತಡೆಯದಿದ್ದರೆ ನಸೀಮ ಮಗಳ ಬೆನ್ನಿಗೆ ಇನ್ನೂ ನಾಲ್ಕು ಗುದ್ದುತ್ತಿದ್ದಳೇನೋ, ಗಂಡನ ವಿಷಯ ಯಾರಾದರೂ ಎತ್ತಿದರೆ, ಅವಳ ಮನ ರೋಷಾ. ತಾತ್ಸಾರ, ಜಿಗುಪ್ಸೆಗಳ ಆಗರವಾಗಿ ಅದುಮಿಡಲಾರದ ತನ್ನ ಭಾವನೆಗಳು ಸಿಟ್ಟು ಅಸಹನೆಯ ರೂಪದಲ್ಲಿ ಮಗಳ ಬೆನ್ನ ಮೇಲೆ ಬಾಸುಂಡೆಗಳಾಗಿ ಬೀಳುತ್ತಿದ್ದವು. ತಾಯಿ ಬಂದು ತಡೆದಾಗ ಎದ್ದು ಹೋಗಿ ಮಂಚದಲ್ಲಿ ಮಲಗಿ ಕಣ್ಣಿರು ಸುರಿಸಿ ಕುದಿಯುತ್ತಿದ್ದ ಹೃದಯವನ್ನು ತಣ್ಣಗಾಗಿಸಲು ಪ್ರಯತ್ನಿಸುತ್ತಿದ್ದಳು.

ಹೆಣ್ಣಿನ ಪ್ರತಿಭಟನೆಯ ನೆಲೆಗಳು ಹೇಗೆ ವ್ಯಕ್ತವಾಗುತ್ತದೆ ಎಂಬುದಾಗಿ ತಿಳಿಯಬಹುದಾಗಿದೆ. ಹೆಣ್ಣು ತನ್ನ ಸಹನೆಯು ಮೀರಿದಾಗ ಆಕೆ ತನ್ನ ಮಕ್ಕಳ ಮೇಲೆ ಕೋಪವನ್ನು ತೀರಿಸಿಕೊಳ್ಳುವಳು. ನಸೀಮಳು ತನ್ನ ವೈವಾಹಿಕ ಜೀವನದಲ್ಲಿ ಅನುಭವಿಸಿದ ನೋವುಗಳನ್ನು ಗಂಡನನ್ನು ಕಂಡೊಡನೆ ಹೊರಹೊಮ್ಮಿ ಮಾತನಾಡ ತೊಡಗುವಳು. ಅವಳ ಬಾಯಿಂದ ಹೊರಬೀಳುತ್ತಿದ್ದ ಮಾತುಗಳನ್ನು ಯಾವ ರೀತಿ ತಡೆಯಬೇಕೆಂದು ಆತನಿಗೆ ಹೊಳೆಯಲಿಲ್ಲ. ಅವಳು ಈ ಕೊನೆಯ ಮಾತಂದಾಗ ಅವನು ಸರ್ಪದಂತೆ ಭುಸುಗುಟ್ಟುತ್ತಾ, "ಇಂತಹ ಮಾತನಾಡಲು ನಿನಗೆಷ್ಟು ಧೈರ್ಯ? ಎಷ್ಟೊಂದು ಮಾತು ಕಲಿತಿದ್ದೀಯಾ? ಎನ್ನುತ್ತಾ ಅವಳನ್ನು ಹೊಡೆಯುವಂತೆ ಕೈಯೆತ್ತಿಕೊಂಡು ಅವಳ ಬಳಿ ಬಂದನು. 'ನನ್ನನ್ನು ಹೊಡೆಯಲು ನಿಮಗೆ ಅಧಿಕಾರವಿಲ್ಲ. ನಿಮ್ಮ ಅನ್ನ ತಿನ್ನದೆ ಮೂರು ವರ್ಷಕ್ಕಿಂತ ಮೇಲಾಯಿತು' ಎನ್ನುತ್ತಾ ನಾದಿರಾ ಅವನೆಡೆಗೆ ತಿರಸ್ಕಾರ ನೋಟ ಬೀರುತ್ತಾ 'ನೀವು ಕೃತಿಯಲ್ಲಿ ಮಾಡಿ ನಮ್ಮ ಹೊಟ್ಟೆ ಉರಿಸುವ ಕೆಲಸವನ್ನು ನಾವು ಬಾಯಲ್ಲಿ ಆಡಿದ ಮಾತ್ರಕ್ಕೆ ನಿಮಗಿಷ್ಟು ಕೋಪ

ಬರುತ್ತದೆ. ಅಲ್ಲ?'[34] ಎಂದಳು. ಈ ರೀತಿಯಲ್ಲಿ ಮನದ ನೋವನ್ನು ಹೊರಹಾಕಿದಳು. ಹೆಣ್ಣನ್ನು ಪ್ರಾಣಿಗಳಂತೆ ಕಾಣುವ ಸಮಾಜದ ಈ ವ್ಯವಸ್ಥೆ ಬದಲಾಗಬೇಕು. ಹೆಣ್ಣು ಮನುಷ್ಯಳು: ಆಕೆಯ ಎದೆಗೂಡಿನಲ್ಲಿರುವುದು ಕಗ್ಗಲಲ್ಲ: ತುಡಿಯುತ್ತಿರುವ ಒಂದು ಹೃದಯ ಎಂಬುದನ್ನು ಎಲ್ಲ ಪುರುಷರೂ ಮನಗಾಣಬೇಕು. ಹೊಸತೊಂದು ಸಮಾಜದ ಉದಯವಾಗಬೇಕು. ನಮ್ಮ ಸಮಾಜದ ಈ ವ್ಯವಸ್ಥೆಯನ್ನು ತನ್ನಂತೆ ನೊಂದ ಹೆಣ್ಣು ಮಕ್ಕಳೆಲ್ಲರೂ ಸೇರಿ ವಿರೋಧಿಸಬೇಕು. ಇದರ ವಿರುದ್ಧ ದಂಗೆಯೇಳಬೇಕು. ಇಡೀ ಸಮಾಜದ ಈ ವ್ಯವಸ್ಥೆಯ ವಿರುದ್ಧ ಅವಳ ಹೃದಯದಲ್ಲಾಗಲೇ ದ್ವೇಷದ, ಪ್ರತಿಕಾರದ ಬೀಜವೊಂದು ಅಂಕುರಿಸ ತೊಡಗಿತ್ತು.

'ವಜ್ರಗಳು' ಕಾದಂಬರಿಯಲ್ಲಿ ನಫೀಸಾಳು ಮದುವೆ ಆಗಿ ಆತನಿಂದ ಬೇರೆಯಾದ ಮೇಲೆ ತನ್ನ ಮಗುವನ್ನು ಸಾಕಿಕೊಂಡು ಬದುಕನ್ನು ನಡೆಸುತ್ತಿರಬೇಕಾದರೆ, ಗಂಡು ಮಗು ತಂದೆಯ ಬಳಿ ಇರಬೇಕೆಂಬ ಧರ್ಮದ ನಿಯಮದಂತೆ ಮಾವ ಬಂದು ಮಗುವನ್ನು ತನ್ನ ಬಳಿಗೆ ಕಳುಹಿಸಿಕೊಡಿ ಎಂದು ಕೇಳಿದಾಗ ನಫೀಸಾಳ ಮನನೊಂದು ಈ ರೀತಿ ಹೇಳುವಳು. 'ತಂದೆ? ಎಲ್ಲಿಯ ತಂದೆ? ಮುನ್ನಾ ನನ್ನ ಮಗ ಒಂಭತ್ತು ತಿಂಗಳು ಹೊಟ್ಟೆಯಲ್ಲಿಟ್ಟು ಎಲ್ಲ ರೀತಿಯ ಮಾನಸಿಕ, ದೈಹಿಕ ನೋವುಗಳನ್ನು ಸಹಿಸಿ ಅವನನ್ನು ಈ ಭೂಮಿಗೆ ತಂದು ಸಾಕಿ ಸಲಹಿದವಳು ನಾನು. ಅವನಿಗಾಗಿ ನಾನು ಎಲ್ಲವನ್ನೂ ತ್ಯಾಗ ಮಾಡಿದ್ದೇನೆ. ಅವನಿಲ್ಲದೆ ನಾನು ಬದುಕಿರಲಾರೆ. ದಯವಿಟ್ಟು ನನ್ನಿಂದ ಅವನನ್ನು ಬೇರ್ಪಡಿಸ ಬೇಡಿ'[35] ಎಂಬ ಮಾತುಗಳು ಆಕೆಯ ಮನದಾಳದಿಂದ ಮೇಲೇರಿ ಬರುತ್ತಿದ್ದವು. ಆದರೆ ಈ ಯಾವ ಮಾತುಗಳೂ ಗಂಟಲಿನಿಂದ ಹೊರ ಬರಲಿಲ್ಲ. ನಾಲಿಗೆ ಮುಷ್ಕರ ಹೂಡಿದಂತಾಡುತಿತ್ತು. ಆದರೆ ಕಣ್ಣುಗಳು ಮಾತ್ರ ಮುಷ್ಕರ ಹೂಡದೆ ನೀರಧಾರೆಯನ್ನು ಹರಿಸ ತೊಡಗಿದವು. ಹುಸೈನನು ಸೆಲ್ಮಾಳ ಮೇಲೆ ಘರ್ಜಿಸುತ್ತಾ ನಿನಗೆ ಹೇಳುವವರು ಕೇಳುವವರು ಯಾರು ಇಲ್ಲವ. ತಲೆಯ ಮೇಲೆ ಬಟ್ಟೆಯಿಲ್ಲದೆ ಹೀಗೆ ಹೊರಗೆ ಓಡಾಡುವುದೇ ಎಂದು ಘರ್ಜಿಸಿದಾಗ ನಫೀಸಾ ಆ ಗಳಿಗೆಯಲ್ಲಿ ಸಹನೆ ಕಳೆದುಕೊಂಡು, 'ನಮ್ಮ ತಲೆಯಲ್ಲಿ ಬಟ್ಟೆ ಇಲ್ಲದಿದ್ದರೆ ಪರಪುರುಷರ ಮುಂದೆ ನಿಂತರೆ ನಾವು ನರಕಕ್ಕೆ ಹೋಗುತ್ತೇವೆ. ಅಷ್ಟೇ ತಾನೆ? ಆದರೆ ನೀನು ಮತ್ತು ನಿನ್ನಂತಹವರಿರುವ ಸ್ವರ್ಗಕ್ಕಿಂತ ನರಕವೇ ವಾಸಿ, ನರಕವೇ ನಮಗಿರಲಿ!"[36] ಎಂದು ರೋಷದಿಂದ ನುಡಿಯುತ್ತಾ ಸೆಲ್ಮಾಳ ಕೈ ಹಿಡಿದು ಹೋದ ಬಗೆಯಲ್ಲಿ ಆಕೆಯ ಪ್ರತಿಭಟನೆಯ ನೆಲೆಯು ಕಂಡುಬರುವುದು.

## 4. <u>ಸ್ತ್ರೀ ಶಿಕ್ಷಣ:</u>

'ನ ಹೀ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ'[37] ಎಂಬಂತೇ ಜ್ಞಾನವು ಮನುಷ್ಯನಿಗೆ ಎಷ್ಟು ಮುಖ್ಯವೆಂಬುದನ್ನು ತಿಳಿಸುತ್ತದೆ. ಜ್ಞಾನಾರ್ಜನೆಯಲ್ಲಿ ಗಂಡು ಹೆಣ್ಣುಗಳೆಂಬ ಭೇದವಿಲ್ಲ. ಸಮನಾಗಿ ವಿದ್ಯೆಯನ್ನು ಪಡೆದು ಪ್ರಾಪಂಚಿಕ ವಿಷಯಗಳನ್ನು ತಿಳಿಯಲು ಶಿಕ್ಷಣ ಅವಶ್ಯಕವಾಗಿರುವುದು. ಸತಿಪದ್ಧತಿ, ಬಾಲ್ಯವಿವಾಹ ಮತ್ತು ವಿಧವಾ ಪದ್ಧತಿಗಳಿಂದ ನರಳುತ್ತಿದ್ದ ಮಹಿಳೆಯರ ಸಾಮಾಜಿಕ, ಆರ್ಥಿಕ ಪರಿಸ್ಥಿತಿ ಅತ್ಯಂತ ಕೆಳಮಟ್ಟದಲ್ಲಿತ್ತು. ಅನೇಕ ಧಾರ್ಮಿಕ, ಸಾಮಾಜಿಕ ನಂಬಿಕೆ, ಆಚರಣೆಗಳು ಸ್ತ್ರೀಯರನ್ನು ಬಲಿತೆಗೆದುಕೊಳ್ಳುತ್ತಿದ್ದವು. ಇಂತಹ ಸಂದರ್ಭದಲ್ಲಿ ಸ್ತ್ರೀ ಶಿಕ್ಷಣವು ಕೈಗೆ ಸಿಲುಕದ ಗಗನದ ಕುಸುಮವಾಗಿತ್ತು. ಈ ಪರಿಸ್ಥಿತಿಯನ್ನು ಸುಧಾರಿಸಲು ನಡೆದಂತಹ ಎರಡು ಪ್ರಮುಖ ಪ್ರಯತ್ನಗಳೆಂದರೆ ಒಂದು ಸಾಮಾಜಿಕ ಸುಧಾರಣಾ ಚಳುವಳಿ ಮತ್ತೊಂದು ಬ್ರಿಟೀಷ್ ಸರ್ಕಾರದ ಶಿಕ್ಷಣ ನೀತಿ, ಸ್ತ್ರೀ ಶಿಕ್ಷಣದ ಬೆಳವಣಿಗೆಯಲ್ಲಿ ಸಮಾಜ ಸುಧಾರಕರ ಕಾರ್ಯಗಳು, ಬ್ರಿಟೀಷ್ ಸರ್ಕಾರದ ಶಿಕ್ಷಣ ನೀತಿ

ಹಾಗೂ ಕ್ರಿಶ್ಚಿಯನ್ ಮಿಷನರಿಗಳು ಪ್ರಮುಖ ಪಾತ್ರ ವಹಿಸಿದವು. ಸಮಾಜ ಸುಧಾರಕರು ಸಾಮಾಜಿಕ ಪಿಡುಗುಗಳನ್ನು ಹೋಗಲಾಡಿಸುವುದರ ಜೊತೆಗೆ ಸ್ತ್ರೀಯರಿಗೆ ಶಿಕ್ಷಣ ನೀಡಿದರೆ ಮಾತ್ರ ಸ್ತ್ರೀಯರ ಮತ್ತು ಸಮಾಜದ ಉದ್ಧಾರ ಸಾಧ್ಯ ಎಂಬುದನ್ನು ಕಂಡುಕೊಂಡು ಸ್ತ್ರೀ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಿದರು. ಇಲ್ಲಿ ಅವರ ಉದ್ದೇಶ ಸಾಮಾಜಿಕ ಪಿಡುಗುಗಳಿಂದ ಮುಕ್ತಿಗೊಳಿಸಿ ಸ್ತ್ರೀಯರ ಸಾಂಪ್ರದಾಯಿಕ ಪಾತ್ರವನ್ನು ಉತ್ತಮಪಡಿಸುವುದು.

ಒಬ್ಬ ಪುರುಷನಿಗೆ ಶಿಕ್ಷಣ ನೀಡಿದರೆ, ಅವನೊಬ್ಬನನ್ನು ವಿದ್ಯಾವಂತನನ್ನಾಗಿ ಮಾಡಿದಂತಾಗುತ್ತದೆ. ಅದೇ ಒಬ್ಬ ಮಹಿಳೆಗೆ ಶಿಕ್ಷಣ ನೀಡಿದರೆ, ಇಡೀ ಒಂದು ಕುಟುಂಬವನ್ನು ಸುಶಿಕ್ಷಿತಗೊಳಿಸಿದಂತಾಗುತ್ತದೆ. ಎಂಬ ನಿಲುವಿದೆ. ಅಮೇರಿಕೆಯ ಅಧ್ಯಕ್ಷರಾಗಿದ್ದ ಕೆನಡಿಯವರೂ ಕೂಡ "ಮಹಿಳೆಯರ ವಿದ್ಯಾಭ್ಯಾಸಕ್ಕೆ ತೊಡಗಿಸುವ ಹಣದಿಂದ ಉಳಿದ ಯಾವ ಉದ್ದಿಮೆಯ ಲಾಭಕ್ಕಿಂತಲೂ ಹೆಚ್ಚು ಲಾಭ ಪಡೆಯಬಹುದು"[38] ಎಂದಿದ್ದಾರೆ. ಸ್ತ್ರೀ ಶಿಕ್ಷಣ ಎಂಬುದು ಎಷ್ಟು ಅವಶ್ಯಕತೆಯನ್ನು ಪಡೆದಿದೆ ಎಂಬುದಾಗಿ ತಿಳಿಯಬಹುದಾಗಿದೆ.

ಪರಂಪರೆಯ ಪುರುಷ ಪ್ರಧಾನ ಸಮಾಜದಲ್ಲಿ ಶಿಕ್ಷಣ ಎಂಬುದು ಹೆಣ್ಣು ಮಕ್ಕಳ ಬದುಕಿನಲ್ಲಿ ದೂರವೇ ಉಳಿದಿರುವಂತಹುದು. ಹೆಣ್ಣಾಗಿ ಹುಟ್ಟಿದ ಆಕೆ ಕುಟುಂಬ ನಿರ್ವಹಣೆಯನ್ನು ಮಾತ್ರ ಮಾಡಬೇಕು. ಮನೆಕೆಲಸ, ತಾಯ್ತಾನ, ಹಿರಿಯರ ಸೇವೆ ಹೀಗೆ ಆಕೆ ತನ್ನ ಸಂಪೂರ್ಣ ಸಮಯವನ್ನು ಈ ಚೌಕಟ್ಟಿನ ಬಂಧನದಲ್ಲಿ ಸಿಲುಕಿ ಬದುಕಬೇಕೆಂಬುದಾಗಿ ಪುರುಷ ಪ್ರಧಾನ ಸಮಾಜವು ವಿಧಿಸಿತ್ತು. ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳು ಹೊರಗೆ ಬುರ್ಕಾ ಇಲ್ಲದೆ ಹೋಗಬಾರದು. ಪರ ಪುರುಷರಿಗೆ ತಮ್ಮ ಮುಖ ಚಹರೆಯನ್ನು ತೋರಿಸಬಾರದು ಇದನ್ನು ಮೀರಿದರೆ ಧರ್ಮದ ಪ್ರಕಾರ ನರಕಕ್ಕೆ ಸಿಲುಕುವರು ಎಂಬ ನಂಬಿಕೆಗಳನ್ನು ಹೆಣ್ಣಿಗೆ ಹೇಳಲ್ಪಟ್ಟದ್ದರಿಂದ ಅವರು ಬೇರೆಯ ಹುಡುಗಿಯರಂತೆ ಶಾಲೆಗೆ ಹೋಗಿ ಕಲಿಕೆಯಲ್ಲಿ ಮುನ್ನಡೆಯಲು ಸಾಧ್ಯವಾಗಲಿಲ್ಲ. ಮುಸ್ಲಿಂ ಸಮುದಾಯದಲ್ಲಿ ಹೆಣ್ಣಿಗೆ ಕುರಾನ್ ಓದುವಷ್ಟು ಬಂದರೆ ಸಾಕು. ಆಕೆಯನ್ನು ಶಾಲೆಗೆ ಕಳುಹಿಸುವುದು ಅವಶ್ಯವಿಲ್ಲದಂತೆ ಮನಗಂಡಿದ್ದರು. ಆಧುನಿಕತೆಗೆ ಒಳಗಾದ ಪರಿಸರವು ಕ್ರಮೇಣವಾಗಿ ಹೆಣ್ಣು ತಾನು ಶಿಕ್ಷಣವನ್ನು ಪಡೆಯದೇ ಹೋದರೂ ತನ್ನ ಮಕ್ಕಳನ್ನಾದರೂ ಶಾಲೆಗೆ ಕಳುಹಿಸಿ ವಿದ್ಯಾವಂತರನ್ನಾಗಿ ಮಾಡುವಂತಹ ನಿಲುವುಗಳು ಸಾರಾ ಅವರ ಕಾದಂಬರಿಗಳಲ್ಲಿ ಕಂಡುಬರುತ್ತದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು ಎಂಬುದು ಸಾರಾ ಅವರ ನೈಜ ಜೀವನದ ಘಟನೆಗಳಾಗಿದ್ದು ತಾವು ಹೇಗೆ ಶಿಕ್ಷಣವನ್ನು ಪಡೆದರು ಎಂಬುದಾಗಿ ತಿಳಿಸಿರುವರು. ಚಂದ್ರಗಿರಿ ನದಿಯ ದಕ್ಷಿಣ ಭಾಗದಲ್ಲಿ ಮಲೆಯಾಳಂ ಶಾಲೆಗಳಿದ್ದರೂ ಚಂದ್ರಗಿರಿಯ ಉತ್ತರ ಭಾಗವಾದ ಕಾಸರಗೋಡಿನಲ್ಲಿ ಹೆಚ್ಚಿನ ಶಾಲೆಗಳು ಕನ್ನಡ ಶಾಲೆಗಳಾಗಿದ್ದವು. ಇವರ ಮಾತೃಭಾಷೆ ಮಲೆಯಾಳವಾಗಿದ್ದರೂ ಮಾತೃಭಾಷೆಯನ್ನೇ ಕಲಿತು ಅದನ್ನು ಉದ್ಧಾರ ಮಾಡಬೇಕೆಂದು ಇವರ ತಂದೆ ಅಂದವರಲ್ಲ. ವಿದ್ಯೆ ಮುಖ್ಯ. ಓದಿ ಬುದ್ಧಿವಂತರಾಗಲು, ಜ್ಞಾನ ಸಂಪಾದಿಸಲು ಭಾಷೆ ಯಾವುದಾದರೇನು? ಮನೆಯ ಸಮೀಪವಿರುವುದು ಕನ್ನಡ ಶಾಲೆಯಾದ ಹೆಣ್ಣು ಮಕ್ಕಳ ಶಾಲೆಯೊಂದಕ್ಕೆ ಸೇರಿಸಿದರು ಎಂದು ತಮ್ಮ ಶಿಕ್ಷಣವು ಹೇಗೆ ಸಾಗಿತ್ತು ಎಂಬುದರ ಬಗೆ ಹೇಳುವರು. ನನ್ನನ್ನು ನೋಡಿ ನಮ್ಮ ಸಮಾಜದ ಇತರ ಹೆಣ್ಣು ಮಕ್ಕಳೂ ಶಾಲೆಗೆ ಹೋಗಿ ವಿದ್ಯೆ ಪಡೆಯಬೇಕು. ತಮ್ಮ ಅಜ್ಞಾನದ ಕತ್ತಲೆಯ ಗುಹೆಯಿಂದ ಈ ಹೆಣ್ಣು ಮಕ್ಕಳು ಹೊರಬರಬೇಕು ಎಂಬ ಹೆಬ್ಬಯಕೆ ಇವರ

ತಂದೆಯದಾಗಿತ್ತು. 'ಅಯ್ಯೋ, ಮುಸ್ಲಿಂ ಹುಡುಗಿ ಮುಟ್ಟಿಸಿಕೊಳ್ಳಬೇಡ'[39] ಎಂದು ಹೇಳಿ ದೂರ ಸರಿಯುವ ಬ್ರಾಹ್ಮಣ ಮತ್ತು ಕೊಂಕಣಿ ಹುಡುಗಿಯರು ತರಗತಿಯಲ್ಲಿರುತ್ತಿದ್ದರು. ಗಾಂಧೀಜಿಯ ಭಕ್ತಳಾದ ಒರ್ವ ಉಪಾಧ್ಯಾಯಿನಿ ಈ ಶಾಲೆಯಲ್ಲಿ ಯಾರು ಭೇದ ತೋರದಂತೆ ನೋಡಿಕೊಂಡವರು ಆಗಿದ್ದರು. ಮುಸ್ಲಿಂ ಸಮುದಾಯದ ಜನರು ತಮ್ಮ ಜನಾಂಗದ ಹೆಣ್ಣು ಮಕ್ಕಳು ಶಾಲೆಗೆ ಹೋಗುವುದನ್ನು ಸಹಿಸದವರು ಸಾರಾ ಅವರ ತಾಯಿಯೊಡನೆ ಬಂದು ನಯವಾಗಿ ಮಾತನಾಡುತ್ತಾ "ನಿಮ್ಮ ಮಗಳು ತುಂಬಾ ಬೆಳೆದು ಬಿಟ್ಟಿದ್ದಾಳೆ. ಇನ್ನು ಅವಳನ್ನು ಶಾಲೆಗೆ ಕಳುಹಿಸುವುದು ಸರಿಯಿಲ್ಲ" ಎಂದು ಆಗಾಗ ಹೇಳುತ್ತಿದ್ದರು. ಆಗ ಅವರ ತಂದೆ 'ಹೆಣ್ಣು ಮಕ್ಕಳಿಗೆ ವಿದ್ಯೆ ಕೊಡಕೂಡದೆಂದು ಖುರ್‌ಆನಿನಲ್ಲಿ ಎಲ್ಲೂ ಹೇಳಿಲ್ಲವಲ್ಲ? ಮುಂದಿನ ಜನಾಂಗವನ್ನು ಪೋಷಿಸಿ ಉತ್ತಮ ಪ್ರಜೆಯಾಗಿ ಮುಂದೆ ತರಬೇಕಾದವಳು ತಾಯಿಯಾದುದರಿಂದ ಗಂಡಿಗಿಂತಲೂ ಹೆಣ್ಣಿಗೆ ವಿದ್ಯಾಭ್ಯಾಸದ ಅಗತ್ಯವಿದೆ ಎಂದು ಮಹಮ್ಮದ್ ಪೈಗಂಬರರು ಬೋಧಿಸಿದ್ದಾರೆ. ಆದ್ದರಿಂದ ನನ್ನ ಮಗಳ ವಿದ್ಯಾಭ್ಯಾಸದ ಕುರಿತು ಯಾರೂ ಏನು ಹೇಳಬೇಕಾಗಿಲ್ಲ. ನನಗೆ ಸರಿ ಕಂಡಂತೆ ಮಾಡುತ್ತೇನೆ".[40] ಎಂದು ತನ್ನ ಮಗಳ ಶಿಕ್ಷಣದ ಬಗೆಗೆ ಕುರಿತು ಮಾತನಾಡಿದರು. ಮುಸ್ಲಿಂ ಸಮುದಾಯದ ಹೆಣ್ಣಾಗಿ ಹುಟ್ಟಿದರಿಂದ ಇತರ ಗೆಳತಿಯರಂತೆ ತಾನು ಹೊರಗೆ ಎಲ್ಲೂ ಹೋಗದಿದ್ದುದರಿಂದ ತಾನು ಇನ್ನು ಮುಂದೆ ಶಾಲೆಗೆ ಹೋಗುವುದಿಲ್ಲ ಎಂದು ಹಟವಿಡಿದುದ್ದರಿಂದ ತಂದೆ ಮಗಳನ್ನು ಕರೆದು, "ನೀನು ನಮ್ಮ ಸಮಾಜದಲ್ಲಿ ಶಾಲೆಗೆ ಹೋಗಿ ಕಲಿಯುತ್ತಿರುವ ಪ್ರಥಮ ಮುಸ್ಲಿಂ ಹುಡುಗಿ. ನೀನು ಶಾಲೆಗೆ ಹೋಗುವುದೇ ಊರವರಿಗೆ ನುಂಗಲಾರದ ತುತ್ತಾಗಿರುವಾಗ ಇನ್ನು ನೀನು ಪರ ಊರಿಗೆ ಆಡಲು ಹೋದರೇ ಊರವರು ಏನೆಂದಾರು? ನಿನ್ನಿಂದ ಯಾವ ತಪ್ಪು ಆಗಬಾರದು. ನೀನೇನಾದರೂ ತಪ್ಪು ಮಾಡಿದರೆ ಆಮೇಲೆ ನಮ್ಮೂರಿನ ಮುಸ್ಲಿಂ ಹೆಣ್ಣು ಮಕ್ಕಳು ಶಾಲೆಯ ಮುಖವನ್ನೇ ನೋಡಲಾರರು. ನಿನ್ನನ್ನು ನೋಡಿ ಉಳಿದವರೂ ಕಲಿಯಲಿ ಎಂದೇ ನಿನ್ನನ್ನು ಶಾಲೆಗೆ ಕಳುಹಿಸುತ್ತಿದ್ದೇನೆ. ನೀನು ಹೀಗೆಲ್ಲಾ ಹಠ ಮಾಡಿದರೆ ನಿನ್ನನ್ನು ಶಾಲೆಯಿಂದ ಬಿಡಿಸಿ ಬಿಡುತ್ತೇನೆ"[41] ಎಂದು ತಂದೆಯು ತನ್ನ ಪ್ರತಿಕ್ರಿಯೆಯನ್ನು ತಿಳಿಸಿದರು. ಹೆಣ್ಣು ಮಕ್ಕಳು ಮನೆಯಿಂದ ಹೊರಗೆ ಹೋಗಬಾರದು, ಗಂಡು ಮಕ್ಕಳಂತೆ ವಿದ್ಯೆ ಪಡೆಯಬಾರದೆಂದಿದ್ದ ಆ ಹಳೆಯ ಸಂಪ್ರದಾಯವನ್ನು ಮುರಿದು ಹೊಸತೊಂದು ಸಂಪ್ರದಾಯವನ್ನು ಸೃಷ್ಟಿಸಿದ ಹರ್ಷ, ತೃಪ್ತಿಯೆಂಬುದು ಸಾರಾ ಅವರ ಕುಟುಂಬದಲ್ಲಿ ನೆಲೆಸಿರುವುದು ಕಂಡುಬರುವುದು.

'ಸಹನಾ' ಕಾದಂಬರಿಯಲ್ಲಿ ಸಕೀನ ತನ್ನ ಮಗಳನ್ನು ಅನಿವಾರ್ಯತೆಯ ಕಾರಣಕ್ಕಾಗಿ ಶಾಲೆಗೆ ಕಳುಹಿಸುವುದು ಕಂಡುಬರುತ್ತದೆ. ನಸೀಮ ಚಿಕ್ಕವಳಿದ್ದಾಗ ತಾಯಿಯ ಜೊತೆಯಲ್ಲಿಯೆ ಹೋಗಿ ತಾಯಿಯೊಡನೆ ಇರುತ್ತಿದ್ದಳು. ಅವಳು ಸ್ವಲ್ಪ ದೊಡ್ಡವಳಾದ ಮೇಲೆ ಅದೇ ಹಿತ್ತಲಿನಲ್ಲಿದ್ದ ಉಳಿದ ಮಕ್ಕಳ ಜೊತೆಯಲ್ಲಿ ಅವಳನ್ನು ಶಾಲೆಗೆ ಕಳುಹಿಸತೊಡಗಿದಳು. ಮಗಳು ಚೆನ್ನಾಗಿ ಓದು, ಬರಹ ಕಲಿತು ಕೆಲಸಕ್ಕೆ ಸೇರಬೇಕೆಂಬ ಯೋಚನೆಯಿಂದೆನೂ ಆಕೆ ಶಾಲೆಗೆ ಕಳುಹಿಸಿದ್ದಲ್ಲ: ತಾನು ಹೋದಡೆಯಲ್ಲೆಲ್ಲಾ ತನ್ನ ಜೊತೆಯಲ್ಲಿ ಬಂದು ತೊಂದರೆ ಕೊಡುತ್ತಾಳೆ. ಅದೂ ಅಲ್ಲದೆ ತಾನಂತೂ ಖುರ್‌ಆನ್ ಏನನ್ನೂ ಓದಿಲ್ಲ. ಆಲಿಫ್.ಬ.ಒಂದೂ ತನಗೆ ಗೊತ್ತಿಲ್ಲ ತನ್ನ ಮಗಳಾದರೂ ಖುರ್‌ಆನ್ ಕಲಿತು ಚೆನ್ನಾಗಿ ನಮಾಜ್ ಮಾಡಲಿ[42] ಎಂಬ ಉದ್ದೇಶದಿಂದ ಅವಳನ್ನು ಶಾಲೆಗೆ ಕಳುಹಿಸಿದ ರೀತಿಯು ಕಂಡುಬರುವುದು.

ನಸೀಮ ಮದುವೆಯಾಗಿ ಒಂದು ಹೆಣ್ಣು ಮಗುವನ್ನು ಪಡೆದು ತನ್ನ ಅತ್ತೆಯ ಮನೆಯಲ್ಲಿ ಅನುಭವಿಸಿದ ಶೋಷಣೆಯಿಂದ ಹೊರಬಂದು ಪ್ರತ್ಯೇಕವಾಗಿ ಬದುಕನ್ನು ನಡೆಸುತ್ತಾ ನಸೀಮಳ ಕತ್ತಲೆ ತುಂಬಿದ ತನ್ನ ಬದುಕಿನ ಒಂದೇ ಒಂದು ಆಶಾಕಿರಣದಂತೆ ರೋಸಿಯು ಇದ್ದಳು. ಇವಳಿಗಾಗಿ ತಾನು ಬದುಕಬೇಕು ಎಂಬಂತೆ ಆಕಾಂಕ್ಷೆಯಿಟ್ಟುಕೊಂಡಿದ್ದಳು. ತನ್ನ ಮಗಳ ಬಗ್ಗೆ ಚಿಂತಿಸುತ್ತಾ ಅವಳ ಬಾಳು ತನ್ನಂತಾಗಬಾರದು. ತಾನು ಈಗಿನಿಂದ ಕಷ್ಟಪಟ್ಟು ದುಡಿದು ಹಣ ಶೇಖರಿಸಿದರೆ ಮಗಳನ್ನು ಶಾಲೆಗೆ

ಕಳಿಸಿ ಅವಳನ್ನು ವಿದ್ಯಾವಂತಳಾಗಿ ಮಾಡಬಹುದು. ಅವಳಿಗೆ ಒಂದು ಉಪಾಧ್ಯಾಯಿನಿಯ ಕೆಲಸವಾದರೂ ದೊರೆಯುವಷ್ಟು ಅವಳನ್ನು ಓದಿಸಬೇಕು ಯಾರ ಹಂಗಿನ ಅನ್ನವನ್ನೂ ಅವಳು ಉಣ್ಣುವಂತಾಗಬಾರದು. ತನ್ನ ಕಾಲಮೇಲೆ ತಾನು ನಿಂತುಕೊಳ್ಳುವಂತಾಗಬೇಕು. ಅವಳು ಮಗಳಲ್ಲ. ಮಗ ಎಂದು ತಾನವಳನ್ನು ಸಾಕುತ್ತೇನೆ. ಹೆಣ್ಣು ಗಂಡಿಗಿಂತ ಯಾವ ರೀತಿಯಲ್ಲೂ ಕಮ್ಮಿಯಿಲ್ಲ ಎಂದು ತಾನು ಎಲ್ಲಾರಿಗೂ ತೋರಿಸಿಕೊಡಬೇಕು. ಎಂದು ತನ್ನ ಮಗಳ ಬಗೆಗೆ ಭವಿಷ್ಯದ ಕಾಳಜಿಯನ್ನು ಇಟ್ಟುಕೊಂಡಿರುವ ತಾಯಿಯ ಮನಸ್ಥಿತಿಯನ್ನು ಗಮನಿಸಬಹುದಾಗಿದೆ.

ನಸೀಮ ತನ್ನ ಮಗಳ ಬಾಲ್ಯದಿಂದಲೇ ಶಿಕ್ಷಣದ ವಿಚಾರಗಳನ್ನು ತಿಳಿಸಬೇಕೆಂಬ ಹಂಬಲದಿಂದ,

"ರೋಸಿ, ನೀನು ದೊಡ್ಡವಳಾದ ಮೇಲೆ ಏನು ಮಾಡುತ್ತಿ? ನಸೀಮ ನಗುತ್ತಾ ಮಗಳೊಡನೆ ಕೇಳಿದಳು.

ರೋಸಿ ಯೋಚಿಸಿದಳು. ತನ್ನ ತಾಯಿ ಏನು ಮಾಡುತ್ತಾಳೆ?

"ಬೀಡಿ ಕಟ್ಟುತ್ತೇನೆ" ತಾಯಿಯೋಡನಂದಳು ಮುಖವರಳಿಸಿ.

"ಥೂ ಕತ್ತೇ ಬೀಡಿ ಕಟ್ಟುತ್ತೀಯಾ, ಟೀಚರಾಗುತ್ತೇನೆಂದು ಹೇಳು"[43] ಎಂದು ನಗುತ್ತಾ ಮಗಳನ್ನು ತಿದ್ದಿದ್ದಳು. ಮಗಳ ಮಾತಿನ ತೊದಲು ತನದಲ್ಲೂ ಶಿಕ್ಷಣ ಪಡೆಯಬೇಕೆಂಬ ಆಕಾಂಕ್ಷೆಯನ್ನು ಮಗಳ ಜೀವನದಲ್ಲಿ ಬಿತ್ತರಿಸುವ ಸಂಗತಿಯು ತಿಳಿಯಬಹುದಾಗಿದೆ.

'ವಜ್ರಗಳು' ಕಾದಂಬರಿಯಲ್ಲಿ ಮಹಮ್ಮದ್ ಹಾಜಿಯವರು ತಮ್ಮ ಮಗಳ ಗುಣಗಳನ್ನು ಸಸಹೊಗಳುತ್ತಿದ್ದರು. "ಗಂಡು ಮಕ್ಕಳ ಎದುರಿಗೆ ಹೆಣ್ಣು ಮಕ್ಕಳನ್ನು ಹೊಗಳಬಾರದು"[44] ಎಂದು ಹಲೀಮ ಅವರ ಮಾತಿಗೆ ಕಡಿವಾಣ ಹಾಕದಿದ್ದರೆ ಅವರು ನಫೀಸಾಳನ್ನು ಇನ್ನಷ್ಟು ಹೊಗಳುತ್ತಿದ್ದರು. ಹೆಣ್ಣು ಮಕ್ಕಳು ಶಾಲೆಗೆ ಹೋಗುವುದಾಗಲಿ, ಓದು, ಬರಹ ಕಲಿಯುವುದು ಅಲ್ಲಿನ ಪದ್ಧತಿಯಾಗಿರಲಿಲ್ಲವಾದ ಕಾರಣ ನಫೀಸಾಳೂ ಓದು, ಬರಹ ಕಲಿಯದೇ ಇರುವುದು ಪರಂಪರೆಯ ಸಾಂಪ್ರದಾಯಿಕತೆಯ ಹೆಸರಿನಲ್ಲಿ ಶಾಲೆಗೆ ಕಳುಹಿಸದೇ ಮನೆಯಲ್ಲಿ ಉಳಿಸಿಕೊಂಡಿರುವುದು ಕಂಡುಬರುವುದು.

ಒಟ್ಟಾರೆ ಪರಂಪರೆ ಮತ್ತು ಆಧುನಿಕತೆಯ ನೆಲೆಯಲ್ಲಿ ಹೆಣ್ಣಿನ ಪಾತ್ರವೆಂಬುದು ಹೇಗೆ ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕವಾಗಿ ಕುಟುಂಬ, ದುಡಿಮೆ, ಶಿಕ್ಷಣದಲ್ಲಿ ಕಾಲಾಕ್ಕಾನುಗುಣವಾಗಿ ಬದಲಾವಣೆಯನ್ನು ಪಡೆದಳು ಎಂಬುದಾಗಿ ತಿಳಿಯಬಹುದಾಗಿದೆ. ಅಲ್ಲದೇ ಗಂಡಿನ ಹಾಗೆ ತಾನು ಸಹ ಬದುಕನ್ನು ನಡೆಸಬಲ್ಲೇನು ಎಂಬಂತಹ ಆಕೆಯ ಸ್ವ ನಿಷ್ಠೆಯ ಬಗೆಯು ವ್ಯಕ್ತವಾಗುತ್ತದೆ. ಪರಂಪರೆಯ ಹೆಸರಿನ ಬಂಧನದಲ್ಲಿ ಸಿಲುಕಿ ತನ್ನ ಅಸ್ತಿತ್ವದ ಇರುವಿಕೆಯನ್ನು ಮರೆಮಾಚಿಕೊಂಡಿದ್ದಾಗ ಆಕೆಯ ವ್ಯಕ್ತಿತ್ವದ ನಿಲುವುಗಳು ಕಂಡುಬರಲಿಲ್ಲ. ಆದರೆ ಆಧುನಿಕತೆಯ ಶಿಕ್ಷಣವು ಹೆಣ್ಣಿನಲ್ಲಿ ಆತ್ಮ ಸ್ಥೈರ್ಯ, ನಂಬಿಕೆ, ಬದುಕುವ ಛಲ. ಸ್ವಾವಲಂಬಿಯಾಗಿ ತಾನು ಬದುಕುವಷ್ಟರ ಮಟ್ಟಿಗೆ ಹೆಣ್ಣು ಪರಂಪರೆಯಿಂದ ಆಧುನಿಕತೆಯೆಡೆಗೆ ಸಾಗಿದ ಬಗೆಯನ್ನು ಗುರುತಿಸಬಹುದಾಗಿದೆ.

## ಕೊನೆ ಟಿಪ್ಪಣಿಗಳು

1. ಪ್ರೊ.ಕೇಶವ ಶರ್ಮ.ಕೆ: ಸ್ತ್ರೀವಾದಿ ಚಿಂತನೆಗಳು, ಪುಟ–270
2. ನಟರಾಜ್ ಹುಳಿಯಾರ್: ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ, ಪುಟ–129
3. ಡಾ. ಮಂಗಳಾ ಪ್ರಿಯದರ್ಶಿನಿ ಡಿ: ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಪುಟ–185
4. ಡಾ. ಶಿವಾನಂದ ಎಸ್. ವಿರಕ್ತಮಠ: ಮಹಿಳೆ ಮತ್ತು ಧರ್ಮ ಪುಟ–86
5. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ–04
6. ಸಾರಾ ಅಬೂಬಕ್ಕರ್: ಸಹನಾ, ಪುಟ–74
7. ಅದೇ, ಪುಟ–75
8. ಅದೇ, ಪುಟ–98
9. ಅದೇ, ಪುಟ–99
10. ಸಾರಾ ಅಬೂಬಕ್ಕರ್: ವಜ್ರಗಳು, ಮುನ್ನುಡಿ–01
11. ಅದೇ. ಪುಟ–05
12. ಅದೇ, ಪುಟ–16
13. ಅದೇ, ಪುಟ–29
14. ಅದೇ, ಪುಟ–33
15. ಅದೇ, ಪುಟ–51
16. ಡಾ. ಹೇಮಲತಾ ಎಚ್.ಎಂ: ಮಹಿಳಾ ಅಧ್ಯಯನ, ಪುಟ–39
17. ಸಾರಾ ಅಬೂಬಕ್ಕರ್; ಚಂದ್ರಗಿರಿ ತೀರದಲ್ಲಿ, ಪುಟ–21
18. ಅದೇ, ಪುಟ–28
19. ಅದೇ, ಪುಟ–32
20. ಅದೇ, ಪುಟ–78
21. ಅದೇ, ಪುಟ–77
22. ಸಾರಾ ಅಬೂಬಕ್ಕರ್: ಸಹನಾ, ಪುಟ–67
23. ಅದೇ, ಪುಟ–97
24. ಸಾರಾ ಅಬೂಬಕ್ಕರ್: ವಜ್ರಗಳು, ಪುಟ–19
25. ಕೆ.ಷರೀಫಾ: ಮುಸ್ಲಿಂ ಮಹಿಳಾ ಸಂವೇದನೆ, ಪುಟ–61
26. ಅದೇ, ಪುಟ–89
27. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ–23
28. ಅದೇ, ಪುಟ–103
29. ಅದೇ, ಪುಟ–107
30. ಸಾರಾ ಅಬೂಬಕ್ಕರ್: ಸಹನಾ, ಪುಟ–124
31. ಅದೇ, ಪುಟ–145

32. ಅದೇ, ಪುಟ–149
33. ಅದೇ, ಪುಟ–156
34. ಅದೇ, ಪುಟ–175
35. ಸಾರಾ ಅಬೂಬಕ್ಕರ್: ವಜ್ರಗಳು, ಪುಟ–50
36. ಅದೇ, ಪುಟ–98
37. ಪ್ರೊ. ಕೇಶವ ಶರ್ಮ.ಕೆ: ಸ್ತ್ರೀವಾದಿ ಚಿಂತನೆಗಳು ಪುಟ–245
38. ಕೆ.ಷರೀಫಾ: ಮುಸ್ಲಿಂ ಮಹಿಳಾ ಸಂವೇದನೆ, ಪುಟ–146
39. ಸಾರಾ ಅಬೂಬಕ್ಕರ್: ಚಂದ್ರಗಿರಿ ತೀರದಲ್ಲಿ, ಪುಟ–91
40. ಅದೇ, ಪುಟ–98
41. ಸಾರಾ ಅಬೂಬಕ್ಕರ್: ಸಹನಾ, ಪುಟ–105
42. ಅದೇ, ಪುಟ–134
43. ಅದೇ, ಪುಟ–144
44. ಅದೇ, ಪುಟ–187

## ಅಧ್ಯಾಯ – 4

# ಇಸ್ಲಾಂ ಧರ್ಮದ ಮದುವೆ ಕಲ್ಪನೆ

ಮದುವೆಯ ಪರಿಕಲ್ಪನೆಯು ಗಂಡು-ಹೆಣ್ಣಿನ ವೈವಾಹಿಕ ಜೀವನವನ್ನು ಬಿಂಬಿಸುವಂತಹುದು. ಇಸ್ಲಾಂ ಧರ್ಮದ ವಿವಾಹ ಪದ್ಧತಿಯಲ್ಲಿ ವಿಶಿಷ್ಟವಾದ ನಿಯಮಗಳು, ವಿವಾಹ ವ್ಯವಸ್ಥೆಯಲ್ಲಿ ಹಾಗೂ ಸ್ತ್ರೀ ನಿರ್ಬಂಧನೆಗಳ ಆಚರಣೆಗಳ ವಿವರಣೆಯನ್ನು ಸಾಮಾಜಿಕ ಹಿನ್ನೆಲೆಯಿಂದ ಗುರುತಿಸಬಹುದಾಗಿದೆ. ಇಸ್ಲಾಂ ಧರ್ಮದ ಅನುಯಾಯಿಯು ಧಾರ್ಮಿಕವಾದ ಐದು ಮುಖ್ಯ ಕರ್ತವ್ಯಗಳನ್ನು ಪಾಲಿಸಬೇಕೆಂದು ಮಹಮ್ಮದ್ ಪೈಗಂಬರ್‌ರ ಆಜ್ಞೆಯಾಗಿದೆ ಎಂದು ಹೇಳಲಾಗುತ್ತದೆ. ಅವುಗಳೆಂದರೆ ಅಲ್ಲಾನನ್ನು ನಂಬುವುದು. ಪೈಗಂಬರ್ ಆತನ ಪ್ರವಾದಿ, ನಮಾಜ್ ಮಾಡುವುದು, ಜಕಾತ್ (ದಾನ) ಮಾಡುವುದು, ರೋಜಾ ಆಚರಿಸುವುದು (ಉಪವಾಸ), ಹಜ್ (ಪವಿತ್ರ ಮಕ್ಕಾಯಾತ್ರೆ) ಯಾತ್ರೆ ನಡೆಸುವುದನ್ನು ಮುಸಲ್ಮಾನರ ಕರ್ತವ್ಯಗಳೆಂದು ರೂಢಿಸಲಾಗಿರುವುದು. ಪೈಗಂಬರರ ಸಂದೇಶಗಳು ಹಾಗೂ ಬೋಧನೆಗಳೆಂದು ಪ್ರಸಿದ್ಧವಾದ ಕುರಾನ್ ಇಸ್ಲಾಂ ಧರ್ಮದ ಪವಿತ್ರ ಗ್ರಂಥವೂ, ಕಾನೂನು ಗ್ರಂಥವೂ ಆಗಿರುವುದನ್ನು ತಿಳಿಯಬಹುದಾಗಿದೆ.

ಇಸ್ಲಾಂ ಧರ್ಮದ ವೈವಾಹಿಕ ನಿಯಮಗಳಲ್ಲಿ ಕೆಲವು ಪದ್ಧತಿಗಳು ಹೆಣ್ಣಿನ ದೃಷ್ಟಿಯಲ್ಲಿ ಕಷ್ಟಕರವಾಗಿರುವುದು. ಪರದಾ ಪದ್ಧತಿಯ ಆಚರಣೆ, ಮರುವಿವಾಹ ಪದ್ಧತಿಯ ಅನುಸರಣೆ ಹಾಗೂ ತಲಾಖ್ ಸಂಪ್ರದಾಯಗಳು ಹೆಣ್ಣನ್ನು ವೈವಾಹಿಕ ನಿಯಂತ್ರಣಕ್ಕೆ ಒಳಪಡಿಸುವ ಕ್ರಮವು ಕಂಡುಬರುವುದು. ವಿವಾಹ ವಿಚ್ಛೇದನದ ತರುವಾಯ ಇಲ್ಲವೆ ಗಂಡನ ಮರಣಾ ನಂತರದಲ್ಲಿ ಮುಸ್ಲಿಂ ಮಹಿಳೆ ಬೇರೆ ವಿವಾಹ ಒಪ್ಪಂದಗಳಿಗೆ ಕಾಯುವ ಪದ್ಧತಿಯನ್ನು ಅನುಸರಿಸಲಾಗಿದೆ. ಇದನ್ನು 'ಇದ್ದತ್' ಎಂದು ಕರೆಯುಲಾಗುತ್ತದೆ. ಈ ಅವಧಿಯು ಮೂರು ತಿಂಗಳ ಹತ್ತು ದಿನಗಳವರಗೆ ಇರುತ್ತದೆ.

ಮುಸ್ಲಿಂ ವಿವಾಹದ ಪ್ರಾಚೀನ ಪದ್ಧತಿಯಲ್ಲಿ ಸ್ತ್ರೀ ಮಾನ್ಯತೆ ನೀಡುವ 'ಬೀನಾ' ವಿವಾಹ ಪದ್ಧತಿ ಇತ್ತೆಂದು ಹೇಳಲಾಗುತ್ತದೆ. ಆಮೇಲೆ ಇದರ ನಂತರ ಪುರುಷ ಮಾನ್ಯತೆಯ 'ಬಾಲ್' ವಿವಾಹ ಪ್ರಕಾರವನ್ನು ಪ್ರಸಿದ್ಧಿ ಪಡಿಸಲಾಯಿತೆಂದು ಮುಸ್ಲಿಂ ವಿವಾಹ ಬಗೆಗಳಲ್ಲಿ ಉಲ್ಲೇಖಿಸಲಾಗಿದೆ. 'ಸಹಿ ವಿವಾಹ'ವು ಸಕ್ರಮ ಒಪ್ಪಂದ ವಿವಾಹ ಪದ್ಧತಿಯಾಗಿದೆ. 'ಬಾತಿಲ್' ವಿವಾಹ ಬಗೆಯನ್ನು ಅಕ್ರಮ ವಿವಾಹವೆಂದು, ಅಪರಿಪೂರ್ಣ ವಿವಾಹ ಪದ್ಧತಿಯೆಂದು ಹೆಸರಿಸಲಾಗಿದೆ. ಶಾಶ್ವತವಾದ ವಿವಾಹ ಒಪ್ಪಂದವನ್ನು 'ನಿಖಾ ವಿವಾಹ'ವೆಂದೂ, ತಾತ್ಕಾಲಿಕ ವಿವಾಹವನ್ನು 'ಮುತಾ ವಿವಾಹ' ಎಂದೂ ಕರೆಯಲಾಗುತ್ತದೆ. 'ನಿಖಾ' ವಿವಾಹವನ್ನು ಶಿಯಾ ಮತ್ತು ಸುನ್ನಿ ಪಂಗಡಗಳೆರಡರಲ್ಲೂ ಅನುಸರಣೆಯಾಗುತ್ತಿದ್ದು: ಇದು ನೈಜ ಅಥವಾ ಸಹಜ ವಿವಾಹ ಪದ್ಧತಿಯೆಂದು ಕರೆಯಲ್ಪಟ್ಟಿದೆ. ಆದರೆ 'ಮುತ' ವಿವಾಹ ಪದ್ಧತಿಯನ್ನು ಕೇವಲ ಲೈಂಗಿಕ ಭೋಗಕ್ಕೆ ನಡೆಸಲಾಗುತ್ತದೆ ಎಂದು ಹೇಳಲ್ಪಟ್ಟಿದ್ದರೂ ಈ ಪದ್ಧತಿಯನ್ನು ಶಿಯಾ ಪಂಗಡದಲ್ಲಿ ಮಾತ್ರ ಅನುಸರಿಸಲಾಗುತ್ತದೆ ಎಂದು ತಿಳಿಯಬಹುದಾಗಿದೆ. ಮುಸ್ಲಿಂ ವಿವಾಹ ಪದ್ಧತಿಯಲ್ಲಿ ಮೆಹರ್ ಮತ್ತು ತಲಾಖ್ ಪರಿಕಲ್ಪನೆಗಳಿಗೆ ವಿಶೇಷ ಮಹತ್ವವನ್ನು ಕಲ್ಪಿಸಲಾಗುತ್ತದೆ. ತಮ್ಮ ಗಂಡನಿಂದ ಮೊತ್ತವನ್ನು ಹೊಂದುವುದು 'ಮೆಹರ್'ನಲ್ಲಿ ಹೇಳಲಾಗುತ್ತದೆ. ಹಣದ ಮೊತ್ತ ಅಥವಾ ಆಸ್ತಿಯನ್ನು 'ಮೆಹರ್' ಆಗಿ ನೀಡಲ್ಪಡುತ್ತದೆ. ಮುಸ್ಲಿಂ ಧರ್ಮದಲ್ಲಿ 'ತಲಾಖ್' ನಿಯಮವು ವಿವಾಹ ವಿಚ್ಛೇದನ ಪದ್ಧತಿಯಾಗಿದೆ. ಇದನ್ನು ಪ್ರವಾದಿ ಮಹಮ್ಮದ್ ಪೈಗಂಬರ್‌ರು ಒಪ್ಪದಿದ್ದರೂ ಆತನ ಅನುಯಾಯಿಗಳೂ ಇದನ್ನು ವ್ಯಾಪಕವಾಗಿ ರೂಢಿಸಿರುವುದನ್ನು ಕಾಣಬಹುದಾಗಿದೆ. 1939ರಲ್ಲಿ ಮುಸ್ಲಿಂ ವಿವಾಹ ಕಾನೂನಿನಲ್ಲಿ ಕೂಡಾ ಈ 'ತಲಾಖ್' ವಿವಾಹ ವಿಚ್ಛೇದನ ನಿಯಮವನ್ನು ಪರಿಷ್ಕರಿಸಿ ಒಪ್ಪಿಕೊಳ್ಳಲಾಗಿರುವುದು. ಹೆಣ್ಣಿನ ದೃಷ್ಟಿಯಿಂದ ಈ ಪದ್ಧತಿಯನ್ನು ನಕಾರಾತ್ಮಕವಾದ

ನೆಲೆಯಿಂದ ವಿಶ್ಲೇಷಿಸಿ, ಇದನ್ನು ಜಾಗತಿಕ ಮಟ್ಟದಲ್ಲಿ ಅನೇಕ ಸ್ತ್ರೀವಾದಿಗಳು ವಿರೋಧಿಸುತ್ತಾ ಬಂದಿರುವುದನ್ನು ಗಮನಿಸಬಹುದಾಗಿದೆ.

ಮುಸ್ಲಿಂ ಸಮುದಾಯದವರು ತಮ್ಮ ಆರ್ಥಿಕತೆಗನುಗುಣವಾಗಿ ವಿವಾಹವನ್ನು ನೆರವೆರಿಸುವರು. ಇವರಲ್ಲಿ ಹೆಣ್ಣು ಹೆತ್ತ ಕುಟುಂಬದವರಿಗೆ ತಮ್ಮ ಮಗಳು ಅಪ್ರಾಪ್ತ ಬಾಲಕಿಯಾಗಿರಬೇಕಾದರೆ ಮದುವೆಯನ್ನು ಮಾಡಿ ತಮ್ಮ ಜವಾಬ್ದಾರಿಯನ್ನು ಕಳೆದುಕೊಳ್ಳಬೇಕೆಂಬ ತುಡಿತ ಇದ್ದರೆ, ಗಂಡಿನ ಕಡೆಯವರಿಗೆ ಮದುವೆಯ ಸಂದರ್ಭದಲ್ಲಿ ವಧುವಿನ ಮೈ ಮೇಲೆಸ ಹಾಕುವ ಚಿನ್ನದ ಒಡವೆಗಳು ಮತ್ತು ವರದಕ್ಷಿಣೆಯು ಮುಖ್ಯವಾಗಿರುತ್ತದೆ. 'ನಿಖಾಹ್' ಎಂಬುದು ಬಡವರ ಮನೆಗಳಲ್ಲಿ ಮಸೀದಿಯಲ್ಲಿ ಸರಳ ರೀತಿಯಲ್ಲಿ ಜರುಗುತ್ತದೆ. ಅಲ್ಲದೇ ಮನೆಯಲ್ಲಿ ಸಣ್ಣಕ್ಕಿ ಅನ್ನ ಮತ್ತು ಮಾಂಸದ ಅಡುಗೆಯನ್ನು ಬಂದವರಿಗೆಲ್ಲ ಬಡಿಸಲಾಗುತ್ತದೆ. ಶ್ರೀಮಂತರ ಮನೆತನಗಳ ವಿವಾಹ ಇದಕ್ಕಿಂತ ಭಿನ್ನವಾಗಿರುತ್ತದೆ.

**ಉದಾಹರಣೆಗೆ:** 'ಸುಳಿಯಲ್ಲಿ ಸಿಕ್ಕವರು' ಕಾದಂಬರಿಯಲ್ಲಿ ಜಮೀನ್ದಾರ ಮೂಸಾ ಹಾಜಿಯವರ ಮಗಳು ಜೊಹರಾಳ ವಿವಾಹ ಅದ್ದೂರಿಯದ್ದಾಗಿದೆ. ರಾತ್ರಿಯ ಹೊತ್ತಿನಲ್ಲಿ ಬಂದ ವರನ ದಿಬ್ಬಣದಲ್ಲಿ ದಪ್ಪು ಹೊಡೆದು ಹಾಡುತ್ತ ಕುಣಿಯುವವರಲ್ಲದೆ ಕತ್ತಿವರಸೆಯವರೂ ಇದ್ದು, ದಿಬ್ಬಣದ ಮುಂಭಾಗದಲ್ಲಿ ಆನೆಯನ್ನು ಅಲಂಕರಿಸಿ ತರಲಾಗಿತ್ತು. ಬಣ್ಣ ಬಣ್ಣದ ದೀಪಾಲಂಕಾರ, ಬಿರುಸು ಬಾಣಗಳು, ಪಟಾಕಿಗಳು ಇವುಗಲ ವಿಶೇಷತೆ, ಅಲ್ಲದೇ ಇಡೀ ಊರಿನವರಿಗೆ ಮಾಂಸದೂಟ, ಶ್ರೀಮಂತ ಮದುಮಗ ತಂದ ಚಿನ್ನಾಭರಣ, ಬಟ್ಟೆ ಬರೆಗಳಿಗಂತೂ ಲೆಕ್ಕವೇ ಇರಲಿಲ್ಲ. ಶ್ರೀಮಂತರ ಮತ್ತು ಬಡವರ ವಿವಾಹದ ಆಚರಣೆಗಳು ಅವರವರ ಆರ್ಥಿಕತೆಗೆ ಅನುಗುಣವಾಗಿ ಜರುಗುವ ಸಮಾರಂಭವಾಗಿದೆ.

ಮದುವೆಯ ಸಮಾರಂಭದಲ್ಲಿ ಕುಟುಂಬದವರು ದಿಬ್ಬಣದಲ್ಲಿ ಸಂಚರಿಸುತ್ತಿರಬೇಕಾದರೆ ರಾಜಕುಮಾರಿ ಮತ್ತು ಮಂತ್ರಿಕುಮಾರನ ಪ್ರಣಯದ ಹಾಡನ್ನು ಹೇಳುವ ಪದ್ಧತಿಯು ಮುಸ್ಲಿಂ ಸಮುದಾಯದ ಕಾಸರಗೋಡಿನ ಆಸುಪಾಸಿನಲ್ಲಿ ಇರುವುದನ್ನು ಗಮನಿಸಬಹುದಾಗಿದೆ. ವಧುವಿಗೆ ಕಿವಿಯ ತುಂಬಾ ಚಿನ್ನದ ಆಲಿಕತ್ (ಒಂದು ವಿಧದ ಆಭರಣ) ಹಾಕುವುದು ಪದ್ಧತಿ. ಇದನ್ನು ಹಾಕದೇ ಹೋದರೆ ಈ ಹೆಣ್ಣು ಹುಡುಗಿಯನ್ನು ಯಾರೂ ಮದುವೆಯಾಗುವುದಿಲ್ಲ ಎಂಬಂತಹ ಬಲವಾದ ನಂಬಿಕೆಯು ಅವರಲ್ಲಿ ಇರುವುದನ್ನು ಕಾಣಬಹುದಾಗಿದೆ. 'ಮಾಪ್ಪಿಳ ಪಾಟ್ಟು' ಮತ್ತು 'ಒಪ್ಪನ ಪಾಟ್ಟು' ಎಂದು ಕೇರಳದಲ್ಲಿ ಪ್ರಸಿದ್ಧವಾಗಿರುವ ಈ ಜಾನಪದ ಹಾಡುಗಳು ಮುಸ್ಲಿಂ ಪುರಾಣದ ಅನೇಕ ಸ್ತ್ರೀ ಪುರುಷರ ಪ್ರಣಯ ಕತೆಗಳನ್ನೊಳಗೊಂಡಿದೆ. ಇದನ್ನು ಮುಸ್ಲಿಂರ ಮದುವೆಯ ಸಂದರ್ಭದಲ್ಲಿ ಹಾಡುವರು ಎಂಬುದಾಗಿ ಸಾರಾ ಅವರ ಕಾದಂಬರಿಗಳಲ್ಲಿ ಗಮನಿಸಬಹುದಾಗಿದೆ.

ಮುಸ್ಲಿಂ ಸಮುದಾಯದ ಮದುವೆಯ ಸಂದರ್ಭದಲ್ಲಿ ಹೆಣ್ಣಿಗೆ ತಂದೆಯು ಇಲ್ಲದೆ ಹೋದರೆ ಅವರಲ್ಲಿ ಒಂದು ರೀತಿಯ ಪದ್ಧತಿ ಇರುವುದನ್ನು ಕಾಣಬಹುದಾಗಿದೆ. 'ಸಹನಾ' ಕಾದಂಬರಿಯಲ್ಲಿ ನಸೀಮಳ ಮದುವೆ ನಿಶ್ಚಯವಾದಾಗ, ಸಕೀನಳಿಗೆ ಅಂತಹ ಹೇಳಿಕೊಳ್ಳುವಂತಹ ಬಳಗವೇನೂ ಇರುವುದಿಲ್ಲ. ಸ್ವಂತ ಕುಟುಂಬದವನು ಎಂದು ಅಬ್ದುಲ್ ಖಾದಿರ್ ಮಾತ್ರ ಇದ್ದನು. ಆದರೆ ನಿಕಾಹ್‌ಗೆ ಮೌಲ್ವಿಗಳ ಬಳಿ ಕುಳಿತು ಹುಡುಗಿಯನ್ನು ಹುಡುಗನಿಗೊಪ್ಪಿಸಲು ತಂದೆ ಅಥವಾ ತಂದೆಯಿಲ್ಲದ ಪಕ್ಷದಲ್ಲಿ ತಂದೆಯ ಬಳಗದವರೇ ಆಗಬೇಕು. ಎಷ್ಟೇ ಹತ್ತಿರದ ರಕ್ತ ಸಂಬಂಧಿಯಾದರೂ ತಾಯಿಯ ಬಳಗದವರು ನಿಕಾಹ್ ನೆರವೇರಿಸುವಂತಿಲ್ಲ. ದೊಡ್ಡ ಮಸೀದಿಯ ಖತೀಬ್ ಸಾಹೇಬರೇ ಮಗಳ ನಿಕಾಹ್ ಮಾಡಿಕೊಡಲಿ ಎಂದು ಹಾಗೆ ಮಾಡಿದರೆ ಹುಡುಗಿ ಅನಾಥಳು, ಬಂಧು ಬಳಗ ಇಲ್ಲದವಳು ಎಂದಾಗುತ್ತದೆ. ಎಂಬ ಸಂಪ್ರದಾಯವು ಇರುವುದನ್ನು ತಿಳಿಯಬಹುದಾಗಿದೆ. ಮದುವೆಯ ಕಲ್ಪನೆ ಕುರಿತು ಅರಿವು ಇಲ್ಲದೆ ಇರುವ ಹುಡುಗಿಗೆ ಮದುವೆ ಮಾಡಿದಾಗ ಆಕೆಯ ಮನಸ್ಸಿನಲ್ಲಿ ಗಂಡನೆಂದರೆ ಹೊಸಬಟ್ಟೆ ತರುವವನು. ತನಗೆ ಅನ್ನ ಹಾಕುವವನು. ಅದಕ್ಕೆ ಬದಲಾಗಿ ತಾನು ಆತನಿಗೆ ಅಡಿಗೆ ಮಾಡಿ ಬಡಿಸಬೇಕು. ಆತನ ಬಟ್ಟೆ ಒಗೆದುಕೊಡಬೇಕು. ಇಷ್ಟೇ ಆಕೆಗೆ ತಿಳಿದಿರುವುದು ಎಂಬುದಾಗಿ ಸಾರಾ ಅವರ 'ಸಹನಾ' ಕಾದಂಬರಿಯಲ್ಲಿ ಗುರುತಿಸಬಹುದಾಗಿದೆ.

'ವಜ್ರಗಳು' ಕಾದಂಬರಿಯಲ್ಲಿ ಮಸೀದಿಯಲ್ಲಿ ನಿಕಾಹ್‌ನ ಕ್ರಮ ಮುಗಿಸಿ ಎಲ್ಲರೂ ಹಾಜಿಯವರ ಮನೆಗೆ ಬಂದರು. ವಧುವಿನೊಡನೆ ಸಮ್ಮತಿ ಕೇಳುವ ಪದ್ಧತಿಯೇ ಆ ಕಾಲದಲ್ಲಿ ಇರದೇ ಇರುವ ಕಾರಣ 'ಈತನನ್ನು ವರಿಸಲು ನಿನ್ನ ಸಮ್ಮತಿ ಇದೆಯೇ?' ಎಂದು ನಫೀಸಳೊಡನೆ ಯಾರು ಕೇಳಲಿಲ್ಲ. ನೂರ ಐದು ರೂಪಾಯಿ ಮಹರಿಗೆ ಬದಲಾಗಿ ಮಹಮ್ಮದ್ ಹಾಜಿಯವರು ತಮ್ಮ ಮಗಳನ್ನು ವರನಿಗೊಪ್ಪಿಸಿದ್ದರು. ಮದುಮಗನ ದಿಬ್ಬಣದ ಜೊತೆಗೆ ಆಕೆಗೆ ಬಹುಪ್ರಿಯವಾದ ಹಾಡು ಕೇಳಿಸತೊಡಗಿತು. ಅದು ಖತೀಜಾ ಬೀಬಿ ಮಹಮ್ಮದ್ ಪೈಗಂಬರರೊಡನೆ ತನ್ನನ್ನು ವರಿಸಬೇಕೆಂದು ಕೇಳಿಕೊಳ್ಳುವ ಹಾಡು. 'ತಮಗಿಂತ ಹಿರಿಯಾಕೆ, ಮೊದಲೆರಡು ಬಾರಿ ವಿವಾಹವಾದಾಕೆ, ಮಗುವೊಂದರ ತಾಯಿಯಾದಾಕೆ' ಎಂದು ಖತೀಜಾ ಬೀಬಿ ತನ್ನ ಕುರಿತು ಹೇಳಿದಾಗ, 'ಆಕೆಯ ಹೆಸರೇನು? ಹೇಳಬಾರದೆ?' ಎಂದು ಕೇಳಿದ ಪೈಗಂಬರ್‌ರ ಪ್ರಶ್ನೆಗೆ ಆಕೆ ಉತ್ತರಿಸುತ್ತಾರೆ. 'ಮಲ್ಲಿಗೆಯಂತಹ ಹೆಣ್ಣು ಮಗಳು: ಆಕೆಯೇ ನಿಮ್ಮ ಖತೀಜಾ ಬೀಬಿ'[1] ಎಂದು ತನ್ನ ಹೆಸರನ್ನೇ ಹೇಳುವ ಅವರ ಪ್ರಾಮಾಣಿಕತೆಯಂತೂ ನಫೀಸಾಗೆ ಬಹಳ ಇಷ್ಟ. ಗಂಡಸರೆಲ್ಲರೂ ಸೇರಿಕೊಂಡು ಕೈ ತಟ್ಟಿಕೊಂಡು ಹಾಡುವ ಈ ಹಾಡನ್ನು ಆಕೆ ಮಂತ್ರ ಮುಗ್ಧಳಾಗಿ ಕಿವಿಗೊಟ್ಟು ಆಲಿಸತೊಡಗಿದಳು. ಆ ಹಾಡಿನಲ್ಲಿ ಆಕೆ ತನ್ನನ್ನು ತಾನು ಮರೆತಳು ಎಂಬಂತಹ ಸಂಗತಿಯನ್ನು ಕಾಣಬಹುದಾಗಿದೆ.

ಮುಸ್ಲಿಂ ಸಮುದಾಯದ ವಿವಾಹಕ್ಕೆ ಸಂಬಂಧಿಸಿದಂತೆ ಪ್ರವಾದಿ ಪೈಗಂಬರರು ಬ್ರಹ್ಮಚರ್ಯಕ್ಕಿಂತ ವಿವಾಹವೇ ಮಿಗಿಲಾದುದೆಂದು ತಿಳಿಸಿದ್ದಲ್ಲದೆ ಅದನ್ನೊಂದು ಧಾರ್ಮಿಕ ಕರ್ತವ್ಯ (ಇಬಾದತ್) ಎಂದು ಹೇಳಿರುವುದನ್ನು ತಿಳಿಯಬಹುದಾಗಿದೆ.

## 1. ಬಾಲ್ಯವಿವಾಹ:

ಕೆಲವು ಸಮುದಾಯಗಳಲ್ಲಿ ರೂಢಿಯಲ್ಲಿರುವಂತಹ ಬಾಲ್ಯವಿವಾಹವು ಎರಡು ತೆರದಲ್ಲಿ ಇರುವುದನ್ನು ಗಮನಿಸಬಹುದಾಗಿದೆ. ಮೊದಲನೆಯದು ವಯಸ್ಕ ಪುರುಷನು ಚಿಕ್ಕ ಹುಡುಗಿಯನ್ನು ಮದುವೆಯಾಗುವುದು. ಎರಡನೆಯದು ಈಗಾಗಲೇ ಮಕ್ಕಳಿರುವಂತಹ ಪುರುಷನನ್ನು ವರಿಸುವುದು ಕಂಡುಬರುತ್ತದೆ. ಇಂತಹ ಬಾಲ್ಯವಿವಾಹವನ್ನು ವಿರೋಧಿಸಿ ಬ್ರಹ್ಮ ಸಮಾಜ, ಆರ್ಯ ಸಮಾಜಗಳು ಪ್ರತಿಭಟನೆಗಳನ್ನು ನಡೆಸಿದವು. ಈಶ್ವರಚಂದ್ರ ವಿದ್ಯಾಸಾಗರರು ಬಾಲ್ಯವಿವಾಹದ ನಿಷೇಧಕ್ಕೂ ಒತ್ತಾಯಿಸಿದರು. 1860ರಲ್ಲಿ ಇಂಡಿಯನ್ ಪೀನಲ್ ಕೋಡ್ ಹತ್ತು ವರ್ಷ ವಯಸ್ಸಿಗಿಂತ ಕಮ್ಮಿ ಇರುವ ಹೆಣ್ಣಿನೊಂದಿಗೆ ಲೈಂಗಿಕ ಸಂಬಂಧ ಹೊಂದುವುದು ಕಾನೂನು ಬಾಹಿರ ಎಂದು ಘೋಷಿಸಿತು. 1872ರಲ್ಲಿ 'The Native marriage act' IIIನ್ನು ಜಾರಿಗೆ ತಂದಿರುವುದು.[2] ಆದರೂ ಸಹಿತ ಈ ಬಾಲ್ಯವಿವಾಹವನ್ನು ಆಚರಿಸಿಕೊಂಡು ಬರುವ ಸಂಪ್ರದಾಯವನ್ನು ಕಾಸರಗೋಡಿನ ಮಧ್ಯಮ ವರ್ಗದ ಕುಟುಂಬದವರಲ್ಲಿ ಗುರುತಿಸಬಹುದಾಗಿದೆ.

ಬಾಲ್ಯವಿವಾಹದಲ್ಲಿ ಹೆಚ್ಚಾಗಿ ವಯಸ್ಸಿನ ಅಂತರವು ಇರುವುದನ್ನು ಗಮನಿಸಬಹುದಾಗಿದೆ. ಮನೆತನದವರು ಮದುವೆ ನಿಶ್ಚಯಿಸಿದಾಗ ಹುಡುಗಿ ಚಿಕ್ಕವಳು ಎಂಬ ಮಾತಿಗೆ ಅವಕಾಶವೇ ಇರುವುದಿಲ್ಲ. "ಅವಳೇನೂ ಯಾವಾಗಲೂ ಚಿಕ್ಕವಳಾಗಿಯೇ ಇರುತ್ತಾಳೆಯೆ? ಒಂದೆರಡು ವರ್ಷಗಳಲ್ಲಿ ದೊಡ್ಡವಳಾಗುವುದಿಲ್ಲವೇ? ಮದುವೆಯಾಗಲು ಚಿಕ್ಕ ಹುಡುಗಿಯೇ ಚೆನ್ನ. ಗಂಡ ಮುದುಕನಾಗಿ ಹಾಸಿಗೆ ಹಿಡಿದಾಗ ಹೆಂಡತಿ ಇನ್ನೂ ಗಟ್ಟಿ ಮುಟ್ಟಾಗಿ ಆತನ ಚಾಕರಿ ಮಾಡಲು ಶಕ್ತಳಾಗುತ್ತಾಳೆ. ಎಂಬುದೇ ಹಿರಿಯರೆಲ್ಲರ ಮನೋಭಾವ. ಹೆಣ್ಣು ಸೃಷ್ಟಿಸಲ್ಪಟ್ಟಿರುವುದೇ ಗಂಡಿನ ಸೇವೆ, ಸಂತೋಷಗಳಿಗಲ್ಲವೆ?[3] ಎಂಬಂತಹ ನಿಲುವು ಇರುವುದನ್ನು ಗಮನಿಸಬಹುದಾಗಿದೆ. ವಿವಾಹದ ಬಗೆಗೆ ಅರಿವೇ ಇಲ್ಲದ್ದಂತಹ ಹೆಣ್ಣಿಗೆ ಮದುವೆಯನ್ನು ಮಾಡಿ ವೈವಾಹಿಕ ಬಂಧನದಲ್ಲಿ ಸಿಲುಕಿಸಿ ಕುಟುಂಬ ನಿರ್ವಹಣೆ, ತಾಯ್ತಾನ, ದೈಹಿಕ ಸ್ಥಿತಿಯು ಹದಗೆಡಿಸಿಕೊಳ್ಳುವುದು. ಈ ರೀತಿಯಾಗಿ ಹೆಣ್ಣಿನ ಬದುಕಿನಲ್ಲಿ ತಿರುವುಗಳಾಗುವುದನ್ನು ಕಾಣಬಹುದಾಗಿದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಮಹಮ್ಮದ್ ಖಾನ್‌ರು ಫಾತಿಮ್ಮಳನ್ನು ಮದುವೆಯಾದಾಗ ಆಕೆಗೆ ಇನ್ನೂ ಹನ್ನೊಂದು ವರ್ಷ ತುಂಬಿತ್ತೊ ಇಲ್ಲವೋ, ದಾಂಪತ್ಯವೆಂದರೇನೆಂದು ತಿಳಿಯದ ವಯಸ್ಸು. ಆದರೆ ಮಹಮ್ಮದ್ ಖಾನರಿಗೆ ಆಗಲೇ ಇಪ್ಪತ್ತೆಂಟು ವರ್ಷ ದಾಟಿದ ಬಗೆಯನ್ನು ಗಮನಿಸಬಹುದಾಗಿದೆ. ಮದುವೆಯ ಕುರಿತು ಸ್ಪಷ್ಟ ಕಲ್ಪನೆಯೇ ಇಲ್ಲದಂತಹ ಹೆಣ್ಣಿಗೆ ಮದುವೆ ಮಾಡಿ ಹೆಂಗಸರೆಲ್ಲರೂ ಸೇರಿ ಆಕೆಗೆ ಮೈ ತುಂಬಾ ಬಂಗಾರದೊಡವೆಗಳಿಂದ ಶೃಂಗರಿಸಿ, ರೇಶ್ಮೆ ಸೀರೆ ಉಡಿಸಿ ಕೈ ತಟ್ಟಿ ಹಾಡುವುದೆಂಬುದು ಮಾತ್ರ ಆಕೆಗೆ ಗೊತ್ತೇ ಹೊರತು ಅದರಾಚೆಗಿನ ಗಂಡು-ಹೆಣ್ಣಿನ ಸಂಬಂಧವು, ವೈವಾಹಿಕ ಜೀವನವು ಹೇಗಿರುತ್ತದೆ ಎಂಬಂತಹ ತಿಳುವಳಿಕೆಯು ಇಲ್ಲದೇ ಇರುವುದನ್ನು ತಿಳಿಯಬಹುದಾಗಿದೆ. ಮದುವೆಗೆ ಮೊದಲು ರಶೀದ್ ನಾದಿರಾಳನ್ನು ನೋಡಿರಲಿಲ್ಲ. ಅವನ ತಾಯಿ ಆಮಿನ ನೋಡಿದ್ದಳು. ಮುಸ್ಲಿಂ ಸಮುದಾಯದಲ್ಲಿ ಮದುವೆಗೆ ಮೊದಲು ಮದುವೆಯಾಗುವ ಹೆಣ್ಣನ್ನು ಯಾರು ನೋಡುವ ಪದ್ಧತಿಯು ಹಿಂದೆ ಇರಲಿಲ್ಲ. ಆದರೆ ಆಧುನಿಕತೆಯ ಪರಿಣಾಮದಿಂದ ಹುಡುಗನ ಸಂಬಂಧಿಗಳಾದ ಸ್ತ್ರೀಯರು ಭಾವಿ ವಧುವನ್ನು ನೋಡುವ ಪದ್ಧತಿ ಪ್ರಾರಂಭವಾಗಿತ್ತು. ಹುಡುಗಿಯನ್ನು ನೋಡಿ ಬಂದು ಆಮಿನ ಹೇಳಿದ ಮಾತುಗಳು ರಶೀದ್‌ಗೆ ಚೆನ್ನಾಗಿ ಜ್ಞಾಪಕವಿತ್ತು. "ನೋಡು ರಶೀ, ಹುಡುಗಿ ಇನ್ನೂ ಚಿಕ್ಕವಳಾದರೂ ನೋಡ್ಲಿಕ್ಕೆ ತುಂಬಾ ಚೆನ್ನಾಗಿದ್ದಾಳೆ. ದೊಡ್ಡ ದೊಡ್ಡ ಕಣ್ಣುಗಳು, ಕೇದಿಗೆಯ ಮೈ ಬಟ್ಟಲಿನಂತ ಮುಖ ಎಲ್ಲವೂ ಇದೆ. ಖುರ್‌ಆನ್ ಚೆನ್ನಾಗಿ ಓದೆ ತಿಳಿದು ಕೊಂಡಿದ್ದಾಳಂತೆ. ಐದು ಹೊತ್ತು ತಪ್ಪದೆ ನಮಾಜ್ ಮಾಡುತ್ತಾಳಂತೆ. ಹತ್ತನೇ ವರ್ಷದಿಂದಲೂ ಮೂವತ್ತೂ ದಿನಗಳೂ ಉಪವಾಸ ಮಾಡುತ್ತಾಳಂತೆ ಮದುವೆಯಾಗಬೇಕಾದ ಹುಡುಗಿಯರು ಹೇಗಿರಬೇಕೊ ಹಾಗಿದ್ದಾಳೆ. ಹದಿನೈದು, ಹದಿನಾರು ವರ್ಷಕ್ಕೆಲ್ಲಾ ಅವಳು ತುಂಬಾ ಸುಂದರಿಯಾಗುತ್ತಾಳೆ"[4] ಎಂದು ತಾಯಿ ಆಮೀನ ಮಗನಿಗೆ ಹೇಳಿದಳು. ಆತ 'ಅಷ್ಟು ಚಿಕ್ಕ ಹುಡುಗಿ ನನಗೆ ಬೇಡಮ್ಮ' ಎಂದು ಹೇಳಿದಾಗ ತಾಯಿ ಕೇಳಿದ್ದಳು. 'ಇನ್ನೇನು ಅವಳ ಅಜ್ಜಿಯನ್ನು ಮದುವೆಯಾಗುತ್ತೀಯಾ? ನನ್ನನ್ನು ನಿನ್ನ ತಂದೆ ನಿಕಾಹ್ ಮಾಡಿಕೊಂಡಾಗ ನನಗಿನ್ನೂ ಹತ್ತು ವರ್ಷವಾಗಿತ್ತು'[5] ಎಂದು ಹೇಳಿದರು. ತಾಯಿ ಹೀಗಂದಿದ್ದರೂ ಹುಡುಗಿ ತುಂಬಾ ಚಿಕ್ಕವಳು ಎಂಬುದು ಅವನ ಮನಸ್ಸಿನಲ್ಲಿ ಕಾಡುತ್ತಲೇ ಇತ್ತು. ಕೆಲವೊಂದು ಪ್ರದೇಶದಲ್ಲಿ ಪುರುಷರು ತಮಗೆ ಇಷ್ಟವಿಲ್ಲದಿದ್ದರೂ ಸಹಿತ ಅನಿವಾರ್ಯ ಕಾರಣಕ್ಕಾಗಿ ಬಾಲ್ಯವಿವಾಹಕ್ಕೆ ಒಪ್ಪಿಗೆಯನ್ನು ಸೂಚಿಸುವುದು ಕಂಡುಬರುತ್ತದೆ.

'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಎಂಬ ಭಾಗದಲ್ಲಿ ಹೆಣ್ಣು ಮಕ್ಕಳಿಗೆ ಹದಿನೆಂಟು ವಯಸ್ಸಿನ ಪ್ರಾಯವಾಗದೆ ಮದುವೆ ಮಾಡಬಾರದು ಎಂದು ಸರಕಾರ ಕಾನೂನು ಮಾಡಿದ್ದರೂ ಕಾಸರಗೋಡಿನಲ್ಲಿ ಈ ಕಾನೂನಿಗೆ ಬೆಲೆಯನ್ನು ಕೊಡದೇ ಇಲ್ಲಿಯ ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳ ಮದುವೆಯ ವಯಸ್ಸು 14 ಅಥವಾ 15. ಎಷ್ಟೇ ಹುಡುಕಿದರೂ ಮದುವೆಯಾಗದ, 18 ವರ್ಷದ ಮುಸ್ಲಿಂ ಹುಡುಗಿ ದೊರೆಯಲಾರಳೂ ಎಂದೂ, ಬಾಲ್ಯವಿವಾಹವು ಇನ್ನೂ ಈ ಸಮುದಾಯದಲ್ಲಿ ಆಚರಿಸಲ್ಪಡುವರು ಎಂಬುದಾಗಿ ಗುರುತಿಸಬಹುದಾಗಿದೆ.

'ಸಹನಾ' ಕಾದಂಬರಿಯಲ್ಲಿ ನಸೀಮಳಿಗೆ ಚಿಕ್ಕ ಪ್ರಾಯದಲ್ಲಿ ಮದುವೆಯನ್ನು ಮಾಡಿ ಆಕೆಯ ಮನಸ್ಸಿನಲ್ಲಿ ಕುಟುಂಬ ಜವಾಬ್ದಾರಿಯ ಹೊರೆಯನ್ನು ಪೂರ್ವ ಸಿದ್ಧತೆಯಾಗಿ ತಾಯಿ ಸಕೀನ ಆಕೆಯ ತಲೆಯಲ್ಲಿ ತುಂಬುವರು. 'ನಸೀಮಾ ನೀನಿನ್ನು ಚಿಕ್ಕವಳೂಂತ ತಿಳಿದುಕೊಳ್ಳಬೇಡ. ಮದುವೆಯಾಗಿ ಒಬ್ಬನ ಹೆಂಡತಿಯಾದೆ. ನೀವಿಬ್ಬರೂ ಒಬ್ಬರ ಕಷ್ಟ ಸುಖದಲ್ಲೊಬ್ಬರು ಭಾಗಿಯಾಗಬೇಕು. ಮಕ್ಕಳಾಟಿಕೆ ಬಿಟ್ಟು ಗಂಭೀರವಾಗಿ ಗಂಡನ ಮನೆಯಲ್ಲಿ ಎಲ್ಲರೂ ಹೇಳಿದ ಹಾಗೆ ಕೇಳಿಕೊಂಡಿರು. ಹೆಣ್ಣಿಗೆ ಭೂಮಿಯಷ್ಟು ಸಹನೆಯಿರಬೇಕು. ಗಂಡನ ಮನೆಯಲ್ಲಿ ಏನು ಹೆಚ್ಚು ಕಮ್ಮಿಯಾದರೂ ಎಲ್ಲವನ್ನು ಸಹಿಸಿಕೊಂಡಿರು. 'ಅಲ್ಲಾಹು ನಿನ್ನನ್ನು ಚೆನ್ನಾಗಿಟ್ಟಿರಲಿ'[6] ಎಂದು ಮಗಳಿಗೆ ಬುದ್ಧಿ ಹೇಳಿ ವೈವಾಹಿಕ ಜೀವನವೆಂದರೆ ಏನೆಂದು ತಿಳಿಯದ ವಯಸ್ಸಿನಲ್ಲಿ ಆಕೆಗೆ ಮದುವೆ ಮಾಡುವ ಬಗೆಯನ್ನು ಕಾಣಬಹುದಾಗಿದೆ. ಹದಿನಾಲ್ಕು ವರ್ಷದ ಹುಡುಗಿಗೆ ಮದುವೆಯನ್ನು ಮಾಡಿದರೆ ಈ ಸಮಾಜವು ಆಕೆಯನ್ನು ನೋಡುವ ಪರಿಯೇ ಬೇರೆ ತೆರನಾಗಿರುತ್ತದೆ. ಮದುವೆಯಾದ ಹೆಂಗಸು, ಪತ್ನಿ ಇನ್ನೂ ಕೆಲವೇ ತಿಂಗಳುಗಳಲ್ಲಿ ತಾಯಿಯೂ ಆಗುತ್ತಾಳೆ. ಗಂಡನ ಮನೆಯಲ್ಲಿ ಎಲ್ಲರ ಬೇಕು ಬೇಡಗಳನ್ನನುಸರಿಸುತ್ತಾ ಎಲ್ಲರಿಗೂ ಹೊಂದಿಕೊಂಡು ಬಾಳಿ 'ಕ್ಷಮಯಾ ಧರಿತ್ರೀ' ಎಂಬ ಹೆಸರನ್ನು ಸಾರ್ಥಕ ಪಡಿಸಿಕೊಳ್ಳಬೇಕು. ಸಮಾಜ ಆಕೆಗೆ ದಯಪಾಲಿಸಿದ ಈ

ಪತ್ನಿಯ ಸ್ಥಾನ ಮತ್ತು ಪ್ರಕೃತ್ತಿದತ್ತವಾದ ತಾಯ್ತಾನದಲ್ಲಿ ಆಕೆ ದೈಹಿಕವಾಗಿಯಾಗಲಿ, ಮಾನಸಿಕವಾಗಿಯಾಗಲಿ ಇನ್ನೂ ಸಿದ್ಧಳಾಗಿಲ್ಲ ಎಂಬುದನ್ನು ಯಾರೂ ಮನಗಾಣುವಂತಹ ಮನಸ್ಥಿತಿಯನ್ನು ಪಡೆಯದೇ ಇರುವುದನ್ನು ತಿಳಿಯಬಹುದಾಗಿದೆ. ನಸೀಮಳು ಬಾಲ್ಯವಿವಾಹವಾಗಿ ಆಕೆಯ ಬದುಕನ್ನು ಸಂಕಷ್ಟಗಳಿಂದ ಅನುಭವಿಸಿದಾಗ ಆಕೆಯ ಮನದಲ್ಲಿ ಮದುವೆಯ ಕುರಿತು ಬರುವ ಆಲೋಚನೆಯೆಂದರೆ ಹದಿನಾಲ್ಕು ವರ್ಷದ ಹುಡುಗಿಗೆ ಮದುವೆ ಮಾಡಿ, ಹದಿನಾರು ವರ್ಷಕ್ಕೆಲ್ಲಾ ಅವಳು ತನ್ನಂತೆ ಎರಡು ಮಕ್ಕಳ ತಾಯಿಯಾಗಿ ಬದುಕಿನ ಬೆಂಕಿಯಲ್ಲಿ ಬೇಯುವುದು. ಇಂದು ಅರಳಿ ನಳನಳಿಸುತ್ತಿರುವ ಈ ಕುಸುಮ ಇನ್ನು ಕೆಲವು ವರ್ಷಗಳಲ್ಲಿ ಕೆಲವು ಮಕ್ಕಳ ತಾಯಿಯಾಗಿ ಆರೋಗ್ಯ ಕಳೆದುಕೊಂಡು ಎಲುಬಿನ ಗೂಡಾಗಿ..... ಚಿಂತಿಸುತ್ತಾ ಕುಳಿತಳು ಆಕೆ. ಮುಸ್ಲಿಂ ಸಮುದಾಯದ ಹೆಣ್ಣಾಗಿ ಹುಟ್ಟಿದ ಬಳಿದ ಆಕೆಗಿರುವುದು ಒಂದೇ ಗುರಿ. ಮದುವೆ! ಯಾರಾದರೊಬ್ಬರ ಕೊರಳಿಗೆ ಆಕೆಯನ್ನು ಕಟ್ಟಬೇಕು![7] ಎಂಬಂತಹ ನಿಲುವುಗಳು ಮನಸ್ಸುಗಳು ಈ ಸಮಾಜದಲ್ಲಿ ಇರುವರು ಎಂಬುದಾಗಿ ಕಾಣಬಹುದಾಗಿದೆ.

## 2. ವರದಕ್ಷಿಣೆ:

ವೇದಕಾಲಿನ ಜಗತ್ತಿನಲ್ಲಿ 'ಕನ್ಯಾಶುಲ್ಕ' ಎಂದಿದ್ದದ್ದು ನಂತರದ ಹಂತಗಳಲ್ಲಿ 'ವರದಕ್ಷಿಣೆ'ಯಾಗಿ ಮಾರ್ಪಟ್ಟಿದ್ದು, ಇದೊಂದು ಸಾಮಾಜಿಕ ಪಿಡುಗು ಆಗಿದೆ. ವಿವಾಹದ ಸಂದರ್ಭದಲ್ಲಿ ವಧು ಕಡೆಯವರು ವರನಿಗೆ ಕೊಡುವ ಹಣದ ಅಥವಾ ಆಸ್ತಿಯ ರೂಪದಲ್ಲಿ ಕೊಡುವ ಮೊತ್ತವಾಗಿದೆ. ಮದುವೆ ಎಂಬುದು ವ್ಯಾಪಾರದ ವಹಿವಾಟಿನಂತೆ ಇಂದಿನ ಜಾಗತಿಕ ಸಂದರ್ಭದಲ್ಲಿ ಆಚರಿಸಲ್ಪಡುವುದು ಕಂಡುಬರುತ್ತದೆ. ಗಂಡು-ಹೆಣ್ಣಿನ ಸಂಬಂಧದಲ್ಲಿ ಹಣದ ವಿಷಯವಾಗಿ ವೈ ಮನಸ್ಸು ಉಂಟಾಗಿ ಹೆಣ್ಣಿನ ಸ್ಥಿತಿಯು ದುರಂತದ ಕಡೆಗೆ ಸಿಲುಕುವುದನ್ನು ಕಾಣಬಹುದಾಗಿದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಮಹಮ್ಮದ್ ಖಾನ್‌ರಿಗೆ ಮದುವೆಯ ಸಿದ್ಧತೆಯಲ್ಲಿರುವಾಗ ಹೆಣ್ಣು ಹುಡುಕಬೇಕಾದರೆ ಬರೀ ಹೆಣ್ಣನ್ನು ಹುಡುಕಿದರೆ ಸಾಲದು. ಆಕೆಯ ಮನೆತನ ಮುಖ್ಯ ಅವಳೊಡನೆ ಬರುವ ಹಣವೂ ಆಸ್ತಿಯೂ ಅಷ್ಟೇ ಮುಖ್ಯ. ಇವೆಲ್ಲವೂ ಕೂಡಿದಾಗ ಹೆಣ್ಣಿನ ವಯಸ್ಸು ಅಷ್ಟು ಮುಖ್ಯವಲ್ಲವೆಂದು ಯಾರಿಗೂ ಅನ್ನಿಸಿರಲೇ ಇರುವುದಿಲ್ಲ ಎಂಬಂತಹ ಮನಸ್ಥಿತಿಯನ್ನು ಪಡೆದಿರುವುದು ತಿಳಿಯುತ್ತದೆ. ಮದುವೆಯನ್ನು ಮಾಡಬೇಕಾದರೆ ಹುಡುಗಿಗೆ ಚಿನ್ನದ ಒಡವೆಗಳು ಹಾಕುವುದು ಮುಖ್ಯವಾಗಿರುತ್ತದೆ. 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಜಮೀಲೆಯ ಮದುವೆಗೆ ವರದಕ್ಷಿಣೆ ಹಣಕ್ಕೆ ಎಷ್ಟು ಪ್ರಯತ್ನಪಟ್ಟರೂ ಮೂರು ಸಾವಿರ ರೂಪಾಯಿಗಳನ್ನು ಒಟ್ಟುಗೂಡಿಸಲು ಮಹಮ್ಮದ್ ಖಾನ್‌ರಿಂದ ಸಾಧ್ಯವಾಗಲಿಲ್ಲ. ಹುಡುಗನ ಮನೆಯವರು ಮದುವೆಯನ್ನು ಅವಸರಿಸಲು ಪ್ರಾರಂಭಿಸಿದರು. ಜೊತೆಗೆ ನಾವು ಬೇರೆ ಹುಡುಗಿ ನೋಡುತ್ತೇವೆ ಎಂದು ಬೆದರಿಸಲು ಆರಂಭಿಸಿದ ಬಗೆಯನ್ನು ತಿಳಿಯಬಹುದಾಗಿದೆ. ತಮ್ಮ ಜೀವನದ ಆಧಾರದಂತೆ ಇದ್ದಂತಹ ತೆಂಗಿನ ತೋಟದ ಒಂದು ಭಾಗವನ್ನು ಮಹಮ್ಮದ್ ಖಾನ್‌ರು ಮಾರಿ ಜಮೀಲೆಯ ಮದುವೆಯ ವರದಕ್ಷಿಣೆಗೆ ಹಣ ಹೊಂದಿಸಿಕೊಳ್ಳುವಂತಹ ಅವರ ಆರ್ಥಿಕ ಸ್ಥಿತಿಯನ್ನು ಬಿಂಬಿಸುವುದು. ವರದಕ್ಷಿಣೆಯನ್ನು ಕೊಡದೇ ಹೋದರೆ ಮದುವೆಯಾದ ಮೇಲೆ ಹೆಣ್ಣು ಅತ್ತೆಯ ಮನೆಯಲ್ಲಿ ಹೇಗೆ ಸಂಕಷ್ಟಗಳನ್ನು ಅನುಭವಿಸುವಳು ಎಂಬುದಾಗಿ ತಿಳಿಯಬಹುದಾಗಿದೆ. ಜಮೀಲಳ ಚಿಕ್ಕ ನಾದಿನಿಗೆ ಮುನೀರಳ ಮದುವೆ ಮಾಡಬೇಕಾದರೆ ಅವರ ತಾಯಿ ಎರಡು ಜೊತೆ ಬಳೆ ಕೊಡುವೆವು ಎಂದು ಹೇಳಿ ನಂತರ ಕೊಡದೇ ಹೋದ ಕಾರಣಕ್ಕಾಗಿ ಅವಳನ್ನು ಅವರ ತವರು ಮನೆಗೆ ಕಳುಹಿಸುವುದು ಕಂಡುಬರುತ್ತದೆ.

'ಸಹನಾ' ಕಾದಂಬರಿಯಲ್ಲಿ ಸಕೀನಳು ತನ್ನ ಮಗಳಿಗೆ ಮದುವೆ ಮಾಡಲು ನಿಶ್ಚಯಿಸಿದಾಗ ಚಿಂತಿಸತೊಡಗಿದಳು. ನಸೀಮಳ ಕಿವಿಯ ಮೇಲ್ಭಾಗದಲ್ಲೂ ಐದೈದು ತೂತು ಮಾಡಿಸಿದ್ದಳು. ಈ ತೂತುಗಳಿಗೆಲ್ಲಾ ಚಿನ್ನದ ರಿಂಗಿನಂತಹ ಆಭರಣವಾಗಬೇಕು. ಒಂದು ಜೋಡು ಹರಳಿನ ಓಲೆಯನ್ನು ಮಾಡಿಸಬೇಕು. ಹುಡುಗನ ಅಂತಸ್ತಿಗೆ ತಕ್ಕಂತೆ ವರದಕ್ಷಿಣೆಯನ್ನು ಕೊಡದೆ ಹೋದರೆ ಯಾವ ಹುಡುಗನೂ ತನ್ನ ಮಗಳನ್ನು ಮದುವೆಯಾಗಲಾರನು ಎಂದು ಚಿಂತಿಸತೊಡಗಿದಳು. ಗಂಡಿನ ಕಡೆಯವರು ಹಣದ ರೂಪದಲ್ಲಿ ವರದಕ್ಷಿಣೆಯನ್ನು ಹೆಣ್ಣಿನ ಕಡೆಯವರಿಂದ ವಸೂಲಿ ಮಾಡುವರು, ಹೆಣ್ಣಿನ ಕಡೆಯವರು ತಮಗೆ ಕಷ್ಟವಾದರೂ ಹಣವನ್ನು ಶೇಖರಿಸಿ ಕೊಡುವರು. ಆದರೆ ಹಣಕ್ಕಿಂತ ಹುಡುಗನ ವ್ಯಕ್ತಿತ್ವವೆಂಬುದು ತುಂಬಾ ಮುಖ್ಯವಾಗುತ್ತದೆ. ಮದುವೆಯಲ್ಲಿ ಗಂಡಿನ ಕಡೆಯವರು ಜಗಳವಾಡಿ ಕೇಳಿ ಚಿನ್ನ ಹಾಕಿಸಿಕೊಳ್ಳುವುದು. ಅದನ್ನು ನಾಲ್ಕೇ ದಿನದಲ್ಲಿ ಅದನ್ನು ಮಾರಿ ಬಿಡುವರು. ಇದು ಎಲ್ಲೆಲ್ಲೂ ನಡೆಯುವ ಪದ್ಧತಿಯಾಗಿರುವುದು.

'ವಜ್ರಗಳು' ಕಾದಂಬರಿಯಲ್ಲಿ ಮಹಮ್ಮದ್ ಹಾಜಿಯವರ ಮಗಳಿಗೆ ಪಟ್ಟಣದ ಹುಡುಗನನ್ನು ಹುಡುಕಬೇಕಾದರೆ, ಇಬ್ರಾಹಿಂ ಬಂದು "ಹಾಜಿಯವರೇ, ನೀವು ಹೇಳಿದ್ದರಲ್ಲ ಪಟ್ಟಣದಲ್ಲಿ ನಿಮ್ಮ ಹುಡುಗಿಗೆ ಒಂದು ವರನನ್ನು ನೋಡಬೇಕೆಂದು?[8] ನಾನು ಓರ್ವ ಹುಡುಗನ ತಂದೆಯೊಡನೆ ನಿಮ್ಮ ವಿಷಯ ಪ್ರಸ್ತಾಪಿಸಿಕೊಂಡು ಬಂದಿದ್ದೇನೆ. ಉತ್ತಮ ಮನೆತನ. ಮೊದಲು ದೊಡ್ಡ ಆಸ್ತಿವಂತರೇನೂ ಆಗಿರಲಿಲ್ಲ. ಆದರೆ ಈಗ ಅವರ ಗಂಡು ಮಕ್ಕಳು ಬೊಂಬಾಯಿಗೆ ಹೋಗಿ ವ್ಯಾಪಾರ ಮಾಡಿ ಚೆನ್ನಾಗಿ ಸಂಪಾದಿಸುತ್ತಾರೆ. ಹುಡುಗ ಹೇಗೆ ಅಂತ ಬೇರೆಯವರಲ್ಲಿ ವಿಚಾರಿಸಿದ್ದಕ್ಕೆ 'ಐಕ್ಲಾಸ್ ಹುಡುಗ'[9] ಅಂತ ಅಂದರು ಎಂದು ಒಂದೇ ಉಸಿರಿನಲ್ಲಿ ವರದಿಯೊಪ್ಪಿಸಿದನು. ಮಹಮ್ಮದ್ ಹಾಜಿಯವರು ಯೋಚನಾಪರರಾದರು. ಅಷ್ಟು ಒಳ್ಳೆಯ ವರನಾದರೆ ವರದಕ್ಷಿಣೆ ಕೂಡಾ ತುಂಬಾ ಸುರಿಯಬೇಕೊ ಏನೋ ಎಂದು ಚಿಂತಿಸತೊಡಗಿದರು. ಅಬ್ದುಲ್ ಸಾಹೇಬರು 'ನಮಗೆ ವರದಕ್ಷಿಣೆ ಎಂದು ಹಣವೇನೂ ಬೇಡ, ಹುಡುಗಿಯ ಹೆಸರಿನಲ್ಲಿ ಏನಾದರೂ ಆಸ್ತಿಕೊಡಿ ಚೆನ್ನಾಗಿ ಮದುವೆ ಮಾಡಿಕೊಡಿ ಎಂದು ಪ್ರಸ್ತಾಪಿಸಿದರು. ಹುಡುಗಿಯನ್ನು ನೋಡಬೇಕೆಂಬ ಪರಿವೇ ಇಲ್ಲದೆ 'ಹುಡುಗಿಯ ಹೆಸರಿನಲ್ಲಿ ಆಸ್ತಿ ಎಷ್ಟು ಕೊಡುತ್ತೀರಿ? ನಗದೆಷ್ಟು?'[10] ಎಂದು ವರನ ತಂದೆಯಿಂದ ಬಂದ ಮೊದಲ ಮಾತುಗಳು: ಹಣದ ಬಗೆಗೆ ಇರುವ ವ್ಯಾಮೋಹವನ್ನು ತಿಳಿಸುವುದು.

ನಫೀಸಾಳು 'ಹಳ್ಳಿಯ ಹುಡುಗಿ' ಎಂದು ತಿರಸ್ಕರಿಸಲಾದ ತನ್ನ ಬದುಕಿನ ದುರಂತವು ತನ್ನ ಮಗಳ ಪಾಲಿಗೆ ಬಾರದಿರಲಿ ಎಂಬ ದೃಷ್ಟಿಯಿಂದ ಸೆಲ್ಮಾಳ ಅತ್ತೆಯಾಗುವವಳನ್ನು ತಮ್ಮ ಮನೆಗೆ ಕರೆಸಿ ಸೆಲ್ಮಾಳನ್ನು ಆಕೆಗೆ ತೋರಿಸಿ "ನಿಮ್ಮ ಮಗನಿಗೆ ಮೆಚ್ಚುಗೆಯಾದರೆ ಮಾತ್ರ ಆತ ಮದುವೆ ಮಾಡಿಕೊಳ್ಳಲಿ" ಎಂದು ತನ್ನ ಮನ ದಿಂಗಿತವನ್ನರುಹಿದಳು. ಆದರೆ ವರನ ಕಡೆಯವರಿಗೆ ಹುಡುಗಿಯ ವಿದ್ಯಾಭ್ಯಾಸ ಮುಖ್ಯವಾಗಿರಲಿಲ್ಲ. ಅವರ ಕಣ್ಣಿದ್ದುದೆಲ್ಲಾ ಸೆಲ್ಮಾಳೊಡನೆ ಬರಬಹುದಾದ ಸಂಪತ್ತಿನಲ್ಲಿ ಆದ್ದರಿಂದ ಅವರು ತಮ್ಮ ಬೇಡಿಕೆ ಮುಂದಿಟ್ಟರು. 'ಆಸ್ತಿಯ ಜೊತೆಯಲ್ಲಿ ನಗದು ಹಣವನ್ನು ಕೊಡಬೇಕು'[11] ಎಂಬ ಬೇಡಿಕೆಗೆ ಸಮ್ಮತಿಸಿದ ಬಗೆಯು ಕಂಡುಬರುತ್ತದೆ.

ಈ ರೀತಿಯಾಗಿ ವರದಕ್ಷಿಣೆ ಪಿಡುಗಿನಿಂದ ಹೆಣ್ಣಿನ ಮೇಲೆ ಕೌಟುಂಬಿಕ ನೆಲೆಯಿಂದ ನಡೆಯುವ ಶೋಷಣೆಯು ಕಂಡುಬರುತ್ತದೆ. ಆರ್ಥಿಕವಾಗಿ, ಸಾಮಾಜಿಕವಾಗಿ ಆಕೆ ಎಲ್ಲರ ತಿರಸ್ಕಾರಕ್ಕೆ ನಿಂದನೆಗೊಳಪಟ್ಟು ಎಷ್ಟೇ ನೋವುಗಳನ್ನು ಅನುಭವಿಸಿದರೂ ಸಹ 'ಪತಿಯ ಅಡಿಯಲ್ಲೇ ಹೆಂಡತಿಯ ಸ್ವರ್ಗವಿರುವುದು'[12] ಎಂಬ ಮಾತಿನಂತೆ ನಡೆದುಕೊಂಡು, ಹಿಂಸೆಯನ್ನು ಅನುಭವಿಸಿದರೂ ಆಕೆ ಪತಿಯ ಮನೆಯಲ್ಲಿ ಉಳಿದು ತನ್ನ ಬದುಕಿನ ಸಂಕಷ್ಟಗಳಿಗೆ ಸಿಲುಕುವುದು ಕಂಡುಬರುತ್ತದೆ.

### 3. ಬಹುಪತ್ನಿತ್ವ :

ಒಬ್ಬ ಪುರುಷ ಏಕಕಾಲದಲ್ಲಿ ಒಬ್ಬಳಿಗಿಂತ ಹೆಚ್ಚು ಜನ ಸ್ತ್ರೀಯರನ್ನು ಪತ್ನಿಯರನ್ನಾಗಿ ಹೊಂದಿರುವುದಕ್ಕೆ 'ಬಹುಪತ್ನಿತ್ವ' ಎಂದು ಕರೆಯುತ್ತಾರೆ. ಅನೇಕ ಸಮುದಾಯಗಳಲ್ಲಿ ಈ ರೀತಿಯ ವಿವಾಹ ಪ್ರಕರಣಗಳನ್ನು ಗುರುತಿಸಬಹುದಾಗಿದೆ. ಮಾನವ ಶಾಸ್ತ್ರಜ್ಞ ಮುರ್ಡಕ್ ಅವರ ಪ್ರಕಾರ 250 ಆದಿವಾಸಿ ಸಮುದಾಯಗಳಲ್ಲಿ ಶೇ. 98ರಷ್ಟು ಬಹುವಿವಾಹ ಸಮೂಹಗಳಿವೆ. ಅಲ್ಲದೇ ಜಗತ್ತಿನಾದ್ಯಂತ

ಹೀಬ್ರೂ, ಆಸ್ಪೀರಿಯನ್, ಬ್ಯಾಬಿಲೋನಿಯಾ, ಗ್ರೀಕ್, ರೋಮ್, ಭಾರತ, ಅರಬ್, ಪಾಕಿಸ್ತಾನ ಹೀಗೆ ಅನೇಕ ನಾಗರೀಕತೆಗಳಲ್ಲಿ ಇದು ಒಪ್ಪಿತ ಪದ್ಧತಿಯಾಗಿದೆ.[13]

ಇಸ್ಲಾಂನ ಯುದ್ದಗಳ ಚರಿತ್ರೆಯನ್ನು ಗಮನಿಸಿದಾಗ, ಯುದ್ದಗಳ ಕಾರಣ, ಪುರುಷರು ಹೆಚ್ಚಾಗಿ ಮಡಿದಿದ್ದರಿಂದ, ಅನಾಥ ಮಹಿಳೆ, ಮಕ್ಕಳ ಸಮಸ್ಯೆಗೆ ಪರಿಹಾರಕ್ಕಾಗಿ ಆಗ ಮಹಮ್ಮದ್‌ರು ಅನಾಥರಿಗೆ ಆಶ್ರಯ ನೀಡುವ ಹಿನ್ನೆಲೆಯಲ್ಲಿ ನಾಲ್ಕರವರೆಗೆ ಮದುವೆಯಾಗಬಹುದೆಂದು ಹೇಳಿದ್ದರು. ಆದರೆ ಅದೇ ಸಂದರ್ಭದಲ್ಲಿ ಕುರಾನ್ ಎಲ್ಲ ಪತ್ನಿಯರನ್ನು ಸಮಾನವಾಗಿ ನೋಡಿಕೊಳ್ಳುವ ಜವಾಬ್ದಾರಿಯನ್ನು ಅವನ ಮೇಲೆ ವಹಿಸಿರುವುದು ಕಂಡುಬರುತ್ತದೆ.

ಮುಸ್ಲಿಂ ಸಮುದಾಯದಲ್ಲಿ ಬಹುಪತ್ನಿತ್ವ ಕುರಿತು ಬಹಳಷ್ಟು ಅಧ್ಯಯನ, ಸಂಶೋಧನೆ ನಡೆಸಿದ ಕಲ್ಕತ್ತೆಯ ಪ್ರವೀಣ್ ಗಂಗೋಪಾಧ್ಯಾಯರವರು ಹೇಳುವುದೆಂದರೆ, "ಮುಸ್ಲಿಮರಲ್ಲಿ ಬಹುವಿವಾಹವು ವಸ್ತುಸ್ಥಿತಿಯಲ್ಲಿ ಒಂದು ಅತಿ ದೊಡ್ಡ ಸುಳ್ಳು" ಎನ್ನುತ್ತಾರೆ. ಅವರ ಸಮೀಕ್ಷೆಯ ಮಾದರಿ ಈ ರೀತಿಯಿದೆ. "ಒಂದು ಕೇರಿಯ 500 ಕುಟುಂಬಗಳ ಮಾಹಿತಿ ಪಡೆದಾಗ 500 ಕುಟುಂಬಗಳಲ್ಲಿ ಒಂದಕ್ಕಿಂತ ಹೆಚ್ಚು ಮದುವೆಯಾದ ಕೇವಲ ಐದು ವ್ಯಕ್ತಿಗಳು ದೊರೆತರು. ಅದರಲ್ಲಿ ಮೂವರು ಮೊದಲ ಪತ್ನಿ ತೀರಿದ ಬಳಿಕ ವಿವಾಹವಾಗಿದ್ದಾರೆ. ನಾಲ್ಕನೆಯವರಿಗೆ ಇಬ್ಬರು ಹೆಂಡಂದಿರಿದ್ದರು. ಅವನಲ್ಲಿ ಸಾಕಷ್ಟು ಸಂಪತಿತ್ತು. ಊರಿನಲ್ಲಿ ಅಪಖ್ಯಾತಿಗೊಳಗಾಗಿದ್ದನು. ಅವನೊಂದಿಗೆ ಊರಿನ ಜನ ವ್ಯವಹಾರ ಇರಿಸಿಕೊಂಡಿರಲಿಲ್ಲ. ಐದನೆಯ ವ್ಯಕ್ತಿ ಮೊದಲ ಮತ್ತು ಎರಡನೆಯ ಹೆಂಡತಿಯಿಂದ ಮಕ್ಕಳಾದ ಮೇಲೆ ಮತ್ತೊಂದು ಮದುವೆಯಾಗಲು ಹವಣಿಸಿದ. ಆಗ ಅಲ್ಲಿನ ಪಂಚಾಯ್ತಿ ಆತನಿಗೆ ರೂ.25000ಗಳ ದಂಡ ವಿಧಿಸಿತು. ಆ ವ್ಯಕ್ತಿ ಬಾಂಕಡಾ ಪ್ರಾಂತ್ಯದಿಂದಲೇ ಬಹಿಷ್ಕೃತನಾದ. 500 ಕುಟುಂಬಗಳಲ್ಲಿ ಬಹುವಿವಾಹದ ಕಥೆ ಒತ್ತಟ್ಟಿಗಿರಲಿ, ಎಷ್ಟೋ ವಯಸ್ಕರಿಗೆ ಇನ್ನೂ ಮದುವೆಯೇ ಆಗಿಲ್ಲ. ಒಬ್ಬರು ನಾಲ್ಕು ಜನರನ್ನು ವಿವಾಹವಾಗುವುದು ಬಹಳ ದೂರದ ಮಾತು."[14] ಎಂದು ಹೇಳುವರು ಅಲ್ಲದೇ ಇದು ಭಾರತದ ಮುಸ್ಲಿಮರ ವಾಸ್ತವ ಸ್ಥಿತಿಯಾಗಿದೆ ಎಂಬುದಾಗಿ ವ್ಯಕ್ತಪಡಿಸಿರುವುದು ಕಂಡುಬರುತ್ತದೆ.

ಸಾರಾರವರು ಮುಸ್ಲಿಂ ಸಮುದಾಯದ ಹೆಣ್ಣಿನ ಸಂಕಷ್ಟಗಳ ಅನುಭವಗಳನ್ನು ತಮ್ಮ ಕಾದಂಬರಿಗಳ ಮೂಲಕ ವ್ಯಕ್ತಪಡಿಸಲು ತೊಡಗಿರುವರು. ಕಾಸರಗೋಡಿನ ತಪಲಿನಲ್ಲಿ ಬಹುಪತ್ನಿತ್ವವೆಂಬುದು ಹೇಗೆ ಹೆಣ್ಣಿನ ಮನಸ್ಸಿಗೆ ಮಾನಸಿಕ ನೋವನ್ನು ಉಂಟುಮಾಡುತ್ತದೆ ಎಂದು ತಿಳಿಸುತ್ತದೆ. 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ರಶೀದ್‌ನಿಂದ ದೂರವಾದ ನಾದಿರಾ ಚಿಂತಿಸತೊಡಗಿದಳು. ಎಲ್ಲರ ಸೇವೆಯನ್ನು ಗೈಯುತ್ತಿದ್ದಂತಹ ಆಕೆಯ ಮನಸ್ಥಿತಿಯನ್ನು ಅರಿಯುವ ಪರಿಯು ಯಾರಿಗೂ ಗೋಚರಿಸಲೇ ಇಲ್ಲ. ರಶೀದ್‌ಗೆ ಹೆಂಡತಿ ಇವಳಲ್ಲದಿದ್ದರೆ ಮತ್ತೊಬ್ಬಳು ಬರುತ್ತಾಳೆ. ಒಬ್ಬಳು ಯಾಕೆ, ನಾಲ್ವರನ್ನು ಬೇಕಾದರೂ ಆತ ವಿವಾಹವಾಗಬಹುದು? ಖುರ್‌ಆನಿನಲ್ಲಿ ಹಾಗೆಯೇ ವಿವರಿಸಲ್ಪಟ್ಟಿದೆಯಲ್ಲ?[15] ಅದನ್ನು ಯಾರೂ ಪ್ರಶ್ನಿಸುವಂತೆಯೇ ಇಲ್ಲ. ಎಂಬುದಾಗಿ ಯೊಚನಾ ಪರಳಾಗುವಳು.

'ಸಹನಾ' ಕಾದಂಬರಿಯಲ್ಲಿ ನಸೀಮಳಿಗೆ ಮದುವೆಯಾಗಿ ಆಕೆಯ ದೇಹಸ್ಥಿತಿಯು ಹದಗೆಟ್ಟಾಗ ಆಕೆಯನ್ನು ಆರೈಕೆ ಮಾಡದೇ, ತನಗೆ ಹೆಣ್ಣಿನ ಸಂಪರ್ಕ ಬೇಕು ಎಂಬ ಮನಸ್ಥಿತಿಯಿಂದ ಪಾಷನು ತಾನು ಇನ್ನೊಂದು ಮದುವೆಯಾಗಬೇಕು. ನಾಲ್ಕು ಹೆಂಡತಿಯನ್ನು ಇಟ್ಟುಕೊಳ್ಳಬಹುದೆಂದು ಖುರ್‌ಆನ್ ಹೇಳಿದೆ. ಮಹಮ್ಮದ್ ಪೈಗಂಬರರು ಸುಮ್ಮನೆ ಹಾಗೆ ಹೇಳಿದ್ದಾರೆಯೇ? ತನ್ನಂತಹವನಿಗಾಗಿಯೇ ಹಾಗೆ ಹೇಳಿರಬೇಕು. ಹೆಂಡತಿ ರೋಗಿಯಾದರೆ ಗಂಡನಿಗೆ ಹೆಣ್ಣು ಬೇಡವೇ? ತನ್ನ ನಿರ್ಧಾರವನ್ನು ತಾಯಿಗೆ ತಿಳಿಸಬೇಕೆಂದು ನಿರ್ಧರಿಸಿದ ಮೇಲೆ ಆತನಿಗೆ ಸುಖವಾಗಿ ನಿದ್ರೆ ಬಂತು. ಪ್ರಾಯದ 13 ವರ್ಷದ ಹುಡುಗಿಯನ್ನು ಕನಸು ಕಾಣುತ್ತಾ ಆತನು ನಿದ್ದೆ ಹೋದನು. ಮರುದಿನ ತನ್ನ ಮನದ ಇಂಗಿತವನ್ನು ತಾಯಿಗೆ ತಿಳಿಸಿದ ನಂತರ 'ನಸೀಮ ಇದಕ್ಕೆ ಒಪ್ಪುವಳೇ?[16] ಎನ್ನುತ್ತ ತಾಯಿಯ ಮುಖ ನೋಡಿದನು. "ಕೋಳಿಯೊಡನೆ ಕೇಳಿ ಯಾರಾದರೂ ಮಸಾಲೆ ರುಬ್ಬುತ್ತಾರೆಯೇ? ಅವಳೊಡನೆ ಯಾಕೆ ಕೇಳಬೇಕು? ನಾಲ್ಕು ಹೆಂಡತಿಯರನ್ನು ಇಟ್ಟುಕೊಳ್ಳಬಹುದು ಎಂದು ಇಸ್ಲಾಂ ಧರ್ಮ ಬೋಧಿಸುತ್ತದೆ. ನಾವೇನಾದರೂ ತಪ್ಪು ಕಾರ್ಯ ಮಾಡುತ್ತಿದ್ದೇವೆಯೇ? ಇಷ್ಟಕ್ಕೂ ಅವಳು ಸರಿಯಾಗಿದಿದ್ದರೆ ನೀನು ಇನ್ನೊಂದು ಮದುವೆಗೆ ಯೋಚಿಸುತ್ತಿದ್ದೆಯಾ?[17]

ಎಂದು ಮಗನ ಮಾತಿಗೆ ಸಮ್ಮತಿಸುವ ಹಾಗೆ ಮಾತುಗಳಾನ್ನಾಡಿದಳು. ನಸೀಮಳಿಗೆ ಗಂಡನ ಮರುಮದುವೆ ವಿಷಯದ ಪ್ರಸ್ತಾಪ ತಿಳಿದು ದಿಗ್ಮೂಢಳಾಗಿ ಗಂಡನ ಬಳಿ ಬಂದು "ನನ್ನನ್ನು ಇಷ್ಟು ಬೇಗ ಮರೆತುಬಿಟ್ಟಿರಾ? ನಾನು ಯಾವ ತಪ್ಪು ಮಾಡಿದ್ದೇನೆ? ದಯವಿಟ್ಟು ನಾನು ಸಾಯುವವರೆಗೆ ತಡೆಯಿರಿ. ನನ್ನನ್ನು ಸುಖವಾಗಿ ಸಾಯಲಾದರೂ ಬಿಡಿ. ನಾನು ಜೀವಂತವಿರುವಾಗ ನಿಮ್ಮನ್ನು ಇನ್ನೊಬ್ಬಳಿಗೆ ಒಪ್ಪಿಸಲಾರೆ. ನನ್ನನ್ನು ಒಳ್ಳೆಯ ವೈದ್ಯರಿಗೆ ತೋರಿಸದಿದ್ದರೆ ನಾನು ಬದುಕುತ್ತಿದ್ದೆ. ಆದರೆ ಈಗ ನೀವು ಅದನ್ನೇನೂ ಮಾಡಬೇಕಾಗಿಲ್ಲ. ಇನ್ನು ಈ ಬದುಕಿನಲ್ಲಿ ನನಗೆ ಯಾವ ಆಸಕ್ತಿಯೂ ಇಲ್ಲ. ಆದರೆ ನಾನು ಹೊರಟು ಹೋಗುವವರೆಗೆ ತಡೆಯಿರಿ"[18] ಎಂದು ಕಲ್ಲೂ ಕರಗುವಂತೆ ಆಕೆ ಆತನ ಕಾಲಿಗೆ ತಲೆ ಚಚ್ಚಿಕೊಳ್ಳುತ್ತಾ ನುಡಿದಾಗ, ಆತನ ಹೃದಯ ಕ್ಷಣಕಾಲ ವಿಚಲಿತವಾದರೂ ಸಹ, "ನಾನು ನಿನ್ನ ತಲಾಖ್ ಕೊಡುತ್ತಿಲ್ಲವಲ್ಲ? ಅಥವಾ ಇಸ್ಲಾಂ ಧರ್ಮಕ್ಕೆ ವಿರೋಧವಾದುದನ್ನೇನಾದರೂ ನಾನು ಮಾಡುತ್ತಿದ್ದೇನೆಯೇ? ನೀನು ಕೂಡಾ ಇಲ್ಲಿಯೇ ಇರು"[19] ನಿರ್ವಿಕಾರವಾಗಿ ಯಾವ ಭಾವೋದ್ವೇಗವೂ ಇಲ್ಲದೇ ನುಡಿದನು.

ನಸೀಮಳ ಸ್ನೇಹಿತೆ ಮರಿಯಳು ಕತೀಜಮ್ಮನ ಮನೆಗೆ ಬಂದು "ಅಲ್ಲ ಕತೀಜಕ್ಕ. ನಿಮ್ಮ ಮಗನಿಗೆ ಇನ್ನೊಂದು ಮದುವೆ ಮಾಡಲು ನಿಮಗೆ ಹೇಗೆ ಮನಸ್ಸು ಬಂತು? ಇವಳು ಹೀಗೆ ಸಾಯುತ್ತಾ ಬಿದ್ದಿರುವಾಗ ಇನ್ನೊಬ್ಬಳನ್ನು ತರುವಷ್ಟು ಕಟುಕರು ನೀವು ಹೇಗೆ ಆದಿರಿ?"[20] ಎಂದು ಕಟುವಾಗಿ ಕೇಳಿದಾಗ, "ಇವಳು ಚೆನ್ನಾಗಿದ್ದಿದ್ದರೆ ನಾನು ಅವನಿಗೆ ಇನ್ನೊಂದು ಮದುವೆ ಮಾಡಿಸುತ್ತಿದ್ದೇನೇ? ಇವಳು ರೋಗಿಯಾದದ್ದರಿಂದ ತಾನೇ ಇನ್ನೊಬ್ಬಳನ್ನು ತರುವುದು? ನನ್ನಿಂದ ಮನೆಕೆಲಸ, ಮಕ್ಕಳ ಕೆಲಸ, ಜೊತೆಗೆ ಇವಳ ಕೆಲಸ ಎಲ್ಲ ಮಾಡಲು ಸಾಧ್ಯವೇ? ಅದೂ ಅಲ್ಲದೆ ಹರೆಯದ ಒಂದು ಗಂಡು ಎಷ್ಟು ಸಮಯ ಹೆಣ್ಣಿನ ಸಂಪರ್ಕವಿಲ್ಲದೆ ಇರಲು ಸಾಧ್ಯ? ಇಷ್ಟಕ್ಕೂ ನಾವೇನು ಇವಳು ಸಾಯಲಿ ಎಂದು ಕಾದು ಕೂತಿದ್ದೇವೆಯೇ? ಇವಳು ಸತ್ತ ಮೇಲೆ ಇನ್ನೊಂದು ನಿಕಾಹ್ ಮಾಡಿಕೊಳ್ಳಬಹುದು ಎಂದು ಹೇಳುವಷ್ಟು ಕಟುಕರು ನಾವಲ್ಲಮ್ಮ ಅಥವಾ ಇವಳಿಗೆ ತಲಾಖ್ ಕೊಟ್ಟು ಇವಳನ್ನು ಮನೆಕೆಲಸ, ಮಕ್ಕಳ ಕೆಲಸಗಳನ್ನೆಲ್ಲ ಮಾಡಿಕೊಂಡು ಇವಳನ್ನೂ ನೋಡಿಕೊಳ್ಳುತ್ತಾಳೆ"[21] ಎಲ್ಲಾ ಕಾರಣಗಳನ್ನು ಸೊಸೆಯ ಮೇಲೆ ಹೊರಿಸಿ ತಮ್ಮ ಮನದ ಆಸೆಗಳನ್ನು ಪೂರೈಸಿಕೊಳ್ಳುವ ತಂತ್ರವು ಕಂಡುಬರುತ್ತದೆ. ನಸೀಮಳ ಬದುಕು ದುರಂತದ ಛಾಯೆಯಲ್ಲಿ ಮುಳುಗಿದಾಗ ನಿರ್ಧಾರಕ್ಕೆ ಬಂದಳು. ಒಂದು ತಿಂಗಳು, ಬಾಳು ಪೂರ್ತಿ ಅವಧಿ ಕೊಟ್ಟರೂ ತಾನಿನ್ನು ಪಾಷಾನ ಬಳಿಗೆ ಹಿಂದಿರುಗಲಾರೆ. ಒಬ್ಬಳು ಜೀವಂತವಿರುವಾಗ ಆಕೆಯ ಕಣ್ಣೆದುರಿಗೆ ಇನ್ನೊಬ್ಬಳನ್ನು ವಿವಾಹವಾಗುವ ನಮ್ಮ ಸಮಾಜದ ಈ ವ್ಯವಸ್ಥೆ ಬದಲಾಗಬೇಕು ಎಂಬಂತಹ ನಿಲುವನ್ನು ಪಡೆದ ಆಕೆಯ ಸ್ಥಿತಿಯನ್ನು ಗುರುತಿಸಬಹುದಾಗಿದೆ.

ಸಾರಾರವರು 'ವಜ್ರಗಳು' ಕಾದಂಬರಿಯ ಮುನ್ನುಡಿ ತಿಳಿಸಿರುವ ವಿಚಾರವೆಂದರೆ ಪತ್ನಿಯೊಡನೆ ಹಲವು ವರ್ಷ ಸಂಸಾರ ಮಾಡಿ ಆಕೆಯ ಸರ್ವಸ್ವವನ್ನು ಕಸಿದುಕೊಂಡ ಗಂಡನು ಮಾತ್ರ ಇನ್ನೋರ್ವಳನ್ನು ವಿವಾಹವಾಗಿ ಸುಖವಾಗಿರುತ್ತಾನೆ. ಆ ಹೆಂಡತಿ ರಕ್ತ ಸಂಬಂಧಿಗಳ ಮನೆಯಲ್ಲಿ ಗುಲಾಮಳಂತೆ ಬದುಕು ನೂಕುತ್ತಾ ನರಕವನ್ನನುಭವಿಸುತ್ತಾಳೆ. ವಜ್ರಗಳೂ, ಹೂವುಗಳೂ, ಕೆಲವೊಮ್ಮೆ ರಕ್ಷಕರಿಲ್ಲದೆ ಬೀದಿಗೆಸೆಯಲ್ಪಡುತ್ತವೆ! ಆದುದರಿಂದಲೇ ಈ ಮುಸ್ಲಿಂ ಮಹಿಳಾ ಮಸೂದೆಯು ಮುಸ್ಲಿಂ ಸ್ತ್ರೀಯರಿಗೆ ಎಷ್ಟೊಂದು ಅನ್ಯಾಯ ಮಾಡಿದೆ. ಯಾವ ರೀತಿ ಮಾರಕವಾಗಿ ಪರಿಣಮಿಸಿದೆ ಎಂದು ಚಿತ್ರಿಸುವ ಸಲುವಾಗಿ ಈ ಕಾದಂಬರಿಯನ್ನು ಈ ರೀತಿ ಕೊನೆಗೊಳಿಸುವ ನಿರ್ಧಾರ ಕೈಗೊಂಡೆ ಎಂದು ಸಾರಾರವರು ತಿಳಿಸಿರುವರು. 'ವಜ್ರಗಳು' ಕಾದಂಬರಿಯಲ್ಲಿ ನಫೀಸಾಳಿಗೆ ಪಟ್ಟಣದ ಹುಡುಗನೊಂದಿಗೆ ಮದುವೆಯನ್ನು ಮಾಡಿದರು. ಹಳ್ಳಿಯ ಹುಡುಗಿಯೆಂದು ತಿರಸ್ಕರಿಸಿ ತವರು ಮನೆಗೆ ಕಳುಹಿಸಿದ ಮೇಲೆ ಆಕೆಯನ್ನು ಪುನಃ ಮನೆಗೆ ಕರೆಯದೇ ಇರುವ ಕಾರಣ ನಫೀಸಳ ಅಣ್ಣ ಕಾಲಿದ್ ಹೊಸದುರ್ಗಕ್ಕೆ ಹೋಗಿ ಬಂದವನು ಒಂದು ಸುದ್ಧಿಯನ್ನು ತಂದನು. ಬಂದಾತನೇ ತಂದೆಯೊಡನೆ, "ಅಬ್ಬಾ ಬದ್ರುದ್ದೀನ್ ಊರಿಗೆ ಬಂದು ಕೆಲವು ದಿನಗಳಾದುವಂತೆ. ಅವನಿಗೆ ಇನ್ನೊಂದು ಮದುವೆಗೆ ಹೆಣ್ಣು ಹುಡುಕುತ್ತಾ ಇದ್ದಾರಂತೆ!"[22] ಎಂದು ತಿಳಿಸಿದನು. ನಫೀಸಾಳು ಬದ್ರುದ್ದೀನ್‌ನಿಂದ ದೂರವಾದ ಮೇಲೆ ಆಕೆಗೆ ಮತ್ತೊಂದು ವಿವಾಹ ಮಾಡಲು ಕುಟುಂಬದವರು ಮುಂದಾದರು. ಮಗುವಿನ ತಾಯಿಯೂ ಆಗಿ ಗಂಡ ಬಿಟ್ಟವಳೆಂದು ಹೆಸರು ಪಡೆದವಳಿಗೆ ಗಂಡು ದೊರೆಯುವುದು ಅಷ್ಟು ಸುಲಭವೇ?[23] ಎಂದು ಪ್ರಸ್ತಾಪಿಸಿದಾಗ ಪತ್ನಿ ತೀರಿ ಹೋಗಿ ನಾಲ್ಕು ಮಕ್ಕಳ ತಂದೆಯೂ ಆಗಿರುವಾತನೊಬ್ಬನು ಪಕ್ಕದ ಊರಿನಲ್ಲಿ ವಿವಾಹದ

ಆಲೋಚನೆಯಲ್ಲಿದ್ದಾನೆಂದು ಆದಾರೋ ಹಾಜಿಗೆ ಸುದ್ದಿ ಮುಟ್ಟಿಸಿದರು. ಹಾಜಿಯವರು ಮರುದಿನವೇ ಆ ಊರಿಗೆ ಪ್ರಯಾಣ ಬೆಳೆಸಿದರು. ನಲ್ವತ್ತರ ಪ್ರಾಯವನ್ನು ದಾಟಿದ ಆತನನ್ನು ಕಂಡಾಗಲೇ ಅವರಿಗೆ ನಿರಾಶೆಯಾಗಿದ್ದರೂ ಸಹಿತ ತನ್ನ ಮಗಳ ಬಾಳು ಸುಖಕರವಾಗಿರಲೆಂದು ಈ ವಿವಾಹವನ್ನು ಮಾಡಲು ತಂದೆಯು ಎಲ್ಲ ಕಾರ್ಯಗಳನ್ನು ಕೈಗೊಂಡರು.

ಬಹುಪತ್ನಿತ್ವ ಇರುವಂತೆಯೇ ಬಹುಪತಿತ್ವವು ಇದ್ದ ಬಗೆಯನ್ನು ಗುರುತಿಸಬಹುದಾಗಿದೆ. ಹಿಂದೂ ಧರ್ಮದಲ್ಲಿ ಇದಕ್ಕೆ ಸಮ್ಮತಿ ಇಲ್ಲದೇ ಹೋದರೂ ಅವರು ಬಹುವಿವಾಹವನ್ನು ಆಗುವರು. ಆದರೆ ಮುಸ್ಲಿಂ ಸಮುದಾಯದಲ್ಲಿ ಇದಕ್ಕೆ ಸಮ್ಮತಿಯಿರುವುದರಿಂದ ಗಂಡು ಎಷ್ಟು ವಿವಾಹವನ್ನು ಆದರೂ ಯಾರು ಕೂಡಾ ಪ್ರಶ್ನೆಯನ್ನು ಮಾಡದೇ ಇರುವುದನ್ನು ಕಾಣಬಹುದಾಗಿದೆ. ಅಲ್ಲದೇ ಹೆಣ್ಣಿನ ಮೇಲೆ ಆಗುವ ಮಾನಸಿಕ ಹಿಂಸೆಗೆ ಕಾರಣವಾಗಿರುವುದನ್ನು ಗುರುತಿಸಬಹುದಾಗಿದೆ.

### 4. <u>ತಲಾಖ್ :</u>

ತಲಾಖ್ ಎಂದರೆ ವಿವಾಹ ವಿಚ್ಛೇದನ, ಗಂಡ ಹೆಂಡತಿಯ ಮನಸ್ತಾಪ. ಹಠದ ಧೋರಣೆಗಳು ತಲಾಖ್‌ಗೆ ಕಾರಣಗಳಾಗುತ್ತವೆ. ಇಂಥ ಸಮಯದಲ್ಲಿ ಇಸ್ಲಾಂ ತಲಾಖ್‌ನ್ನು ಅನುಮತಿಸುತ್ತದೆ. ಇಸ್ಲಾಂ ಧರ್ಮದಲ್ಲಿ ಮದುವೆಯನ್ನು 'ನಿಖಾಹ್' ಎಂದಿರುವರು. ಈ ನಿಕಾಹ್ ಅನ್ನು ನಿಭಾಯಿಸಲಾರದಂತಹ ತೀರ ಅನಿವಾರ್ಯ ಸ್ಥಿತಿ ಬಂದಾಗ ಮಾತ್ರ 'ಅಲ್ಲಾಹ್' ಅತ್ಯಂತ ನೋವಿನಿಂದ ಬಿಡುಗಡೆಗೆ ಅನುಮತಿಸಿದ್ದಾರೆ'[13] ಎಂದು ಪೈಗಂಬರರು ಹೇಳುವುದನ್ನು ತಿಳಿಯಬಹುದಾಗಿದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ಮಹಮ್ಮದ್ ಖಾನ್‌ರು ತಮ್ಮ ಮಗಳಾದ ನಾದಿರಾಗೆ ರಶೀದ್‌ನೊಂದಿಗೆ ವಿವಾಹವನ್ನು ಮಾಡುವರು. ತನ್ನ ಅಳಿಯ ಕಷ್ಟದ ಕಾಲದಲ್ಲಿ ಸಾಲ ಕೊಡದೇ ಹೋದ ಕಾರಣಕ್ಕೆ ಸಿಟ್ಟಿಗೆದ್ದ ತಂದೆ ಅಳಿಯನ ಬಳಿ ಬಂದು ತನ್ನ ಮಗಳಿಗೆ ತಲಾಖ್ ನೀಡಲು ಕೇಳುತ್ತಾನೆ. ಅವನು ತಲಾಖ್ ಕೊಟ್ಟರೆ ನನ್ನ ಮಗಳನ್ನು ಇನ್ನೊಬ್ಬನೊಂದಿಗೆ ನಿಕಾಹ್ ಮಾಡಿ ಕೊಡಬೇಕೆಂಬ ಯೋಚನೆಯಿಂದ ಕೇಳಿದನು. ಹೆಣ್ಣು ಎಂದರೆ 'ನಿನಗೆ ಆ ಗಂಡ ಬೇಡ: ನಾವು ಬೇರೆ ಗಂಡನನ್ನು ತರುತ್ತೇವೆ' ಎಂದರೆ ಆಕೆ ಅದನ್ನು ಒಪ್ಪಿಕೊಳ್ಳಬೇಕು. ಗಂಡು–ಹೆಣ್ಣಿನ ಸಂಬಂಧ ಕೂಡ ಅಷ್ಟೇ 'ನಾನು ಹೆಂಡತಿಯನ್ನು ಬಿಟ್ಟೆ' ಎಂದು ಮೂರು ಬಾರಿ ಹೇಳಿದರೆ ಮುಗಿದೇ ಹೋಯಿತು. ಆ ಕ್ಷಣದಿಂದ ಅವನಾರೊ, ಅವನು ತಂದಂತಹ ಬಟ್ಟೆ ಬರೆ ಸಾಮಾನುಗಳೇನಾದರೂ ಇದ್ದರೆ ಅವುಗಳನ್ನು ಕೂಡಲೇ ಕಳುಹಿಸಿ ಬಿಡಬೇಕು. ವಿಚ್ಛೇದನ ನೀಡಿದ ಬಳಿಕ ಆತ ಪರಪುರುಷನಾಗುತ್ತಾನೆ: ಪರ ಪುರುಷನ ಪದಾರ್ಥಗಳನ್ನು ಉಪಯೋಗಿಸುವುದು. ಅಕ್ಷಮ್ಯ ಅಪರಾಧ. ಆಮೇಲೆ ಮೂರುವರೆ ತಿಂಗಳು ಕಳೆದರೆ ಅವಳು ಬೇರೊಬ್ಬನನ್ನು ವಿವಾಹವಾಗಬಹುದು. ಆ ಗಂಡನಿಂದ ಆಕೆ ಗರ್ಭಿಣಿಯಾಗಿದ್ದಾಳೆಯೇ ಎಂದು ಖಚಿತಪಡಿಸಿಕೊಳ್ಳುವುದಕ್ಕಾಗಿ ಈ ಮೂರುವರೆ ತಿಂಗಳ ಅವಧಿಯನ್ನು ನೀಡಲಾಗುತ್ತದೆ.

ರಶೀದ್ ಮೌಲವಿಗಳು ಬಳಿ ಬಂದು, ಮೌಲವಿಗಳೇ, ನಾನು ನನ್ನ ಹೆಂಡತಿಗೆ ತಲಾಖ್ ನೀಡಲು ಬಂದೆ, ಎಂದು ಹೇಳಿದಾಗ ಮೌಲವಿಗಳು ಹೇಳುವುದೇನು ಉಳಿದಿರಲಿಲ್ಲ. "ನಾನು ನನ್ನ ಹೆಂಡತಿ ಮಹಮ್ಮದ್ ಖಾನರ ಮಗಳು ನಾದಿರಾಳ ತಲಾಖ್ ಒಂದು ಬಾರಿ, ಎರಡು ಬಾರಿ, ಮೂರು ಬಾರಿಯೂ ಹೇಳಿ ಅವಳನ್ನು ಬಿಡುಗಡೆ ಮಾಡಿದ"[24] ಎಂದು ಹೇಳಿದನು. ಮೆಹರ್‌ನ ಹಣವಾದ ನೂರ ಐದು ರೂಪಾಯಿಗಳನ್ನು ರಶೀದ್ ಅಂಗಡಿಯಿಂದ ತಂದು ಖಾನರ ಕೈಯಲ್ಲಿಟ್ಟನು. ಹೆಣ್ಣಿನ ಕಡೆಯವರೇ ತಲಾಖ್ ಕೇಳಿದ್ದರಿಂದ ವರದಕ್ಷಿಣೆಯ ಹಣವನ್ನು ರಶೀದ್ ಹಿಂದಿರುಗಿಸಬೇಕಾಗಿರಲಿಲ್ಲ.[25] ನಾದಿರಾಳಿಗೆ ತಿಳಿಯದೆ ತಂದೆ ಮಹಮ್ಮದ್ ಖಾನ್‌ರು ಮಾಡಿದ ಕುತಂತ್ರ ದುರಾಸೆಗೆ ಆಕೆಯ ಬದುಕು ಬಲಿಯಾದ ಸಂಗತಿಯನ್ನು ತಿಳಿಯಬಹುದಾಗಿದೆ.

ತಲಾಖ್ ಬಗೆಗೆ ಈ ಸಮಾಜವು ಗ್ರಹಿಸಿರುವ ರೀತಿಯು ಸರಿಯಿಲ್ಲದೇ ಇರುವುದರಿಂದ ಖಾಜಿ ಇದರ ವಿವರಗಳನ್ನು ತಿಳಿಸುವರು. "ಈ ಜನರಿಗೆ ಬುದ್ಧಿಯಿಲ್ಲ. ಖುರ್‌ಆನ್‌ನ್ನು ಯಾರು ಸರಿಯಾಗಿ ಅರ್ಥ

ಮಾಡಿಕೊಳ್ಳುವುದಿಲ್ಲ. ಮೂರು ಬಾರಿ ಹೇಳುವುದೆಂದಲ್ಲ. ಮೂರು ತಿಂಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಹೇಳಬೇಕು. ಮೂರು ಬಾರಿ 'ತಲಾಖ್' ಹೇಳುವುದೆಂದರೆ ಅದು ಖುರ್‌ಆನ್ ನಮಗೊದಗಿಸಿದ ಮೂರು ಅವಕಾಶಗಳು. ಈ ಮೂರನೆಯ ಅವಕಾಶವನ್ನು ನಾವು ಉಪಯೋಗಿಸುವಾಗ ನಾವು ಚೆನ್ನಾಗಿ ಯೋಚನೆ ಮಾಡಬೇಕು. ಇನ್ನೆಂದೂ ನನಗೆ ಈ ಹೆಂಡತಿ ಬೇಡ ಎಂಬ ದೃಢವಾದ ನಿಶ್ಚಯದೊಡನೆ ನಾವು ಈ ಮೂರನೇಯ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕು. ಈ ಮೂರು ತಿಂಗಳುಗಳವರೆಗೆ ಗಂಡ-ಹೆಂಡತಿ ಒಂದೇ ಮನೆಯಲ್ಲಿ ಬಾಳಬೇಕು. ಎರಡು 'ತಲಾಖ್' ಆದ ಮೇಲೆಯೂ ಗಂಡ-ಹೆಂಡತಿ ಒಂದಾದರೆ ಆ ವಿಚ್ಛೇದನ ರದ್ದಾಗುತ್ತದೆ. ಪುನಃ ಎಲ್ಲವನ್ನೂ ಮೊದಲಿನಿಂದಾರಂಭಿಸಬೇಕು. ಎರಡು ಅವಕಾಶಗಳನ್ನು ಮಾತ್ರ ಉಪಯೋಗಿಸಿದರೆ ಯಾವ ತೊಂದರೆಯೂ ಇಲ್ಲದೆ ಗಂಡ-ಹೆಂಡತಿ ಒಂದಾಗಬಹುದು. ಆದರೆ ಮೂರನೇಯ ಅವಕಾಶವೂ ಮುಗಿದು ಒಬ್ಬನಿಗೆ ಪುನಃ ಅದೇ ಹೆಂಡತಿ ಬೇಕೆಂದಾದ ಪಕ್ಷದಲ್ಲಿ, ಆಕೆ ಇನ್ನೊಬ್ಬನನ್ನು ವಿವಾಹವಾಗಿ ಆತನೊಡನೆ ಬಾಳಲಾರದೆ ಆತನಿಂದ 'ತಲಾಖ್' ಪಡೆದು ಬಂದವಳಾಗಿರಬೇಕು".[26] ಎಂದು ಹೇಳಿದರು.

'ಸಹನಾ' ಕಾದಂಬರಿಯಲ್ಲಿ ನಸೀಮಳ ಅತ್ತೆ ತನ್ನನ್ನು ತವರು ಮನೆಗೆ ಕಳುಹಿಸದೇ ಇರುವ ವಿಷಯವನ್ನು ಗಂಡನಿಗೆ ತಿಳಿಸಿದಳು. ನಂತರ ಅತ್ತೆಯ ಕೋಪಕ್ಕೆ ಗುರಿಯಾದ ಮೇಲೆ ಯಾವ ವಿಚಾರಗಳನ್ನು ಗಂಡನಿಗೆ ತಿಳಿಸದೇ ನಿಂತಲ್ಲೇ ಯೋಚಿಸಿದಳು. ಮೂರು ತಲಾಖ್‌ನ ಸಂಬಂಧ ಎಂದೇನೋ ಅತ್ತೆ ಹೇಳಿದರಲ್ಲ? ಅಂದರೆ ಇವರು ತನಗೆ ತಲಾಖ್ ಕೊಟ್ಟು ತನ್ನನ್ನು ಕಳುಹಿಸಿಬಿಡುತ್ತಾರೆಯೇ? ತನ್ನ ತಾಯಿ ಇಷ್ಟು ಕಷ್ಟ ಪಟ್ಟು ಮಾಡಿದ ಮದುವೆ ಮುರಿದೀತೇ?[27] ಉಹುಂ, ಹಾಗಾಗಲು ಬಿಡಬಾರದು. ಯಾರೂ ತನ್ನೊಡನೆ ಕೋಪಿಸಿಕೊಳ್ಳದಂತೆ ನಡೆದುಕೊಳ್ಳಬೇಕು ಎಂಬ ಪ್ರಜ್ಞೆ ಆಗಲೇ ಆಕೆಯ ಮನದಲ್ಲಿ ಮೂಡಿತಲ್ಲದೆ, ಆಕೆಯು ತನ್ನ ಇರುವಿಕೆಯನ್ನು ಗಟ್ಟಿಗೊಳಿಸಿಕೊಳ್ಳಲು ಪಡುವ ಪ್ರಯತ್ನಗಳು ಕಂಡುಬರುತ್ತದೆ. ಪಾಷಾನು ನಸೀಮಳನ್ನು ಬಿಟ್ಟು ಬೇರೆ ಹೆಣ್ಣನ್ನು ಮದುವೆಯಾದಾಗ ಸಕೀನ ಪಾಷಾನೊಂದಿಗೆ ನಿನ್ನ ಹೆಂಡತಿ ಮಕ್ಕಳು ಹೇಗಿದ್ದಾರೆ ಎಂದು ಕೇಳಿದಾಗ ಆತ "ಉಮ್ಮ ಕೆಲವು ದಿನಗಳಿಂದ ಮೈಕೈ ನೋವು ಎಂದು ಮಲಗಿದ್ದಾಳೆ. ಇವಳ ಬುದ್ಧಿ ಚೆನ್ನಾಗಿಲ್ಲ. ಯಾವಾಗಲೂ ತನ್ನ ತಾಯಿಯೊಡನೆ ಜಗಳವಾಡುತ್ತಾಳೆ. ಮಕ್ಕಳನ್ನೂ ಸರಿಯಾಗಿ ನೋಡಿಕೊಳ್ಳುವುದಿಲ್ಲ. ಆದ್ದರಿಂದ ಅವಳ-ತಲಾಖ್ ಕೊಟ್ಟು ಅವಳ ಅಣ್ಣನ ಮನೆಗೆ ಕಳುಹಿಸಿ ಬಿಟ್ಟೆ"[28] ಎಂದು ನಿರ್ವಿಕಾರ ಭಾವದಿಂದ ಅವನು ನುಡಿದಂತಹ ಬಗೆಯನ್ನು ಕಾಣಬಹುದಾಗಿದೆ.

ಈ ಧರ್ಮದಲ್ಲಿ ಹೆಣ್ಣಿಗೆ ಯಾವ ಸ್ವಾತಂತ್ರವೂ ಇಲ್ಲದೆ? ಗಂಡನಾದವನು ಬೆಳಿಗ್ಗೆ ಹೆಂಡತಿ ಮಾಡಿದ ಅಡಿಗೆಯನ್ನು ಉಂಡು ಹೋಗಿ ಮಧ್ಯಾಹ್ನದ ಹೊತ್ತಿಗೆ ಆಕೆಗೆ ತಲಾಖ್ ಕೊಡಬಹುದಾದರೂ, ಹೆಂಡತಿಯಾದವಳಿಗೆ ಬೇಡದ ಗಂಡನನ್ನು ಬಿಡಲು ಸಾಧ್ಯವಿಲ್ಲ. ಹಾಗೆಯೇ ಹೆಂಡತಿಯಾದವಳು ಪರಪುರುಷನ ಮುಖವನ್ನು ಕೂಡಾ ನೋಡಬಾರದಾದರೂ ಗಂಡನಾದವನು ಒಂದೇ ಸಲ ನಾಲ್ಕು ಹೆಂಡತಿಯರನ್ನು ಮನೆಯಲ್ಲಿಟ್ಟು ಕೊಳ್ಳಬಹುದು. ತನ್ನ ಗಂಡನು ತನ್ನ ಕಣ್ಣ ಮುಂದೆಯೇ ಇನ್ನೊಬ್ಬಳೊಡನೆ ಸುಖಿಸುತ್ತಾ ತನ್ನ ಹೃದಯವನ್ನು ಒಡೆದು ಚೂರು ಚೂರು ಮಾಡುತ್ತಿದ್ದರೂ ತಾನು ಮಾತ್ರ ಬಾಯಿ ಮುಚ್ಚಿಕೊಂಡು ತೆಪ್ಪಗೆ ಬಿದ್ದಿರಬೇಕು. ಅಂದರೆ ಹೆಣ್ಣೆಂದರೆ ಹೃದಯವೇ ಇಲ್ಲದ, ಹೃದಯವಿರಬೇಕಾದಲ್ಲಿ ಒಂದು ಕಲ್ಲನ್ನು ಇಟ್ಟುಕೊಂಡಿರುವ ಒಂದು ಪ್ರಾಣಿ ಎಂದು ಈ ಗಂಡಸರು ತಿಳಿದಿದ್ದಾರೆಯೇ?[29] ಎಂದು ನಸೀಮಳು ಹೆಣ್ಣಿನ ಮನಸ್ಸಿನ ಮೇಲೆ ಆಗುವ ಶೋಷಣೆಯ ಕುರಿತು ಚಿಂತಿಸ ತೊಡಗಿದಳು. ನಸೀಮಳು ಪಾಷಾನಿಂದ ದೂರವಾದ ಮೇಲೆ ಆತ ಪುನಃ ಆಕೆಯನ್ನು ತನ್ನ ಬಳಿ ಕರೆದಾಗ ಹೋಗಲು ಒಪ್ಪದೇ ಇದ್ದಾಗ ಆತ, "ಈಗೇನೂ ನೀನೇ ಗೆದ್ದೆ, ಮಗಳನ್ನು ನಿನಗೇ ಕೊಟ್ಟೆ, ಆದರೆ ನಿನಗೆ ನೆನಪಿರಲಿ ನಾನು ನಿನ್ನ ತಲಾಖ್ ಕೊಡದೆ, ನೀನು ಇನ್ನೊಬ್ಬನನ್ನು ವಿವಾಹವಾಗುವುದು ಎಂದಿಗೂ ಸಾಧ್ಯವಿಲ್ಲ ಎಂದ, ನಾನು ಆಗಾಗ ಬರುತ್ತಿರುತ್ತೇನೆ. ನನ್ನ ಕೈಲಾದುದನ್ನೇನಾದರೂ ಮಗುವಿನ ಖರ್ಚಿಗಾಗಿ ಕೊಡುತ್ತಿರುತ್ತೇನೆ. ಆದರೆ ನಾನು ಇನ್ನೊಂದು ನಿಕಾಹ್ ಮಾಡಿಕೊಳ್ಳುತ್ತೇನೆಯೇ ಹೊರತು ಸಾಯುವವರೆಗೂ ನಿನ್ನ ತಲಾಖ್ ಕೊಡಲಾರೆ"[30] ಎಂದು ದ್ವೇಷ ಬೆರೆತ ದನಿಯಲ್ಲಿ ನುಡಿದ ಬಗೆಯಲ್ಲಿ ಹೆಣ್ಣನ್ನು ಕೊನೆಯವರೆಗೂ ತನ್ನ ಹತೋಟಿಯಲ್ಲಿಟ್ಟು ಕೊಳ್ಳುವ ಪರಿಯನ್ನು ಕಾಣಬಹುದಾಗಿದೆ.

'ವಜ್ರಗಳು' ಕಾದಂಬರಿಯಲ್ಲಿ ನಫೀಸಾಳು ಹಳ್ಳಿಯ ಹುಡುಗಿಯೆಂದು ಬದ್ರುದ್ದೀನ್‌ನಿಂದ ದೂರವಾದ ನಂತರ ಮಹಮ್ಮದ್ ಹಾಜಿಯವರು ಪತ್ನಿಯನ್ನು ಕರೆದು "ನಾನು ಮಾಂತೋಪಿಗೆ

ಹೊರಟಿದ್ದೇನೆ. ನಫೀಸಾಳ ವಿಷಯ ಏನಾದರೊಂದು ತೀರ್ಮಾನ ಮಾಡಿಕೊಂಡೇ ಬರುತ್ತೇನೆ. ಅವಳನ್ನವರು ಕರೆಸಿಕೊಳ್ಳುವುದಿಲ್ಲವಾದರೆ ಅವಳ ತಲಾಖ್‌ನ್ನಾದರೂ ಕೊಡಲಿ"[31] ಎಂದು ಕೊಂಚ ಉದ್ವಿಗ್ನರಾಗಿಯೇ ನುಡಿದರು. "ಆಂ..... ಏನಂದಿರಿ? ತಲಾಖೇ..... ನಿಮಗೆ ತಲೆಕೆಟ್ಟಿದೆಯೇ? ಹೇಗಾದರೂ ರಾಜಿ ಮಾಡಲು ಪ್ರಯತ್ನಿಸಿ, ಒಂದು ಮಗುವಿರುವಾಗ ತಲಾಖ್ ಕೇಳುವುದು ಬುದ್ಧಿವಂತಿಕೆಯಲ್ಲ. ದುಡುಕಬೇಡಿ" ಎಂದು ಹಲೀಮ ಗಂಡನಿಗೆ ಬುದ್ಧಿವಾದ ಹೇಳಿದಳು. "ಅಬ್ಬಾ...." ಮನೆಯ ಒಳಭಾಗದಿಂದ ನಫೀಸಾಳ ಕ್ಷೀಣವಾದ ಧ್ವನಿ ಕೇಳಿಸಿತು. 'ಏನಮ್ಮಾ?' ತಂದೆ ತಾಯಿಗಳಿಬ್ಬರೂ ಧ್ವನಿ ಬಂದೆಡೆಗೆ ನೋಡಿದರು. ನಫೀಸಾ ನಿಧಾನವಾಗಿ ತಂದೆಯೊಡನೆ, "ಅಬ್ಬಾ, ನಾನವರಿಗೆ ತಕ್ಕ ಹೆಂಡತಿಯಲ್ಲ ಎಂದು ಅವರು ಹಲವು ವಿಧದಲ್ಲಿ ಹೇಳಿಯೇ ಇದ್ದಾರೆ. ಆದ್ದರಿಂದ ಅವರಿಗೆ ತಕ್ಕವಳನ್ನು ಅವರು ವಿವಾಹವಾಗಲಿ. ನನ್ನ ಅಭ್ಯಂತರವೇನೂ ಇಲ್ಲ. ಆದರೆ ದಯವಿಟ್ಟು ನನ್ನ ತಲಾಖ್ ಕೇಳಬೇಡಿ. ಗಂಡಬಿಟ್ಟ ಹೆಣ್ಣು ಎಂಬ ಹೆಸರು ನನಗೆ ಬಾರದಿರಲಿ. ಅವರು ನನ್ನ ಪತಿಯಾಗಿ ನನ್ನ ಮಗುವಿನ ತಂದೆಯಾಗಿರಲಿ ನನಗಷ್ಟೇ ಸಾಕು"[32] ಎಂದು ನೀರಸವಾದ ಧ್ವನಿಯಲ್ಲಿ ನುಡಿದು, ಕಣ್ಣೀರಸಿಕೊಳ್ಳತೊಡಗಿದಳು. ಬದ್ರುದ್ದೀನ್‌ಗೆ ಹೆಣ್ಣು ಕೊಡುವವರು "ಈಗಾಗಲೇ ಪತ್ನಿ ಇರುವಾತನಿಗೆ ನಾವು ಹೆಣ್ಣು ಕೊಡುವುದಿಲ್ಲ: ಆಕೆಗೆ ತಲಾಖ್ ಕೊಟ್ಟರೆ ಮಾತ್ರ ನಮ್ಮ ಹುಡುಗಿಯನ್ನು ಕೊಡುತ್ತೇವೆ"[19] ಎಂದು ಹೇಳಿದಾಗ ಅವರು ನಫೀಸಾಳಿಗೆ ತಲಾಖ್ ನೀಡಿದ ಕಾಗದವನ್ನು ಮಸೀದಿಗೆ ಕಳುಹಿಸಿಕೊಟ್ಟರು. ಮಹಮ್ಮದ್ ಹಾಜಿಯವರು ಮಸೀದಿಯ ಬಳಿ ಮಧ್ಯಾಹ್ನದ ಹೊತ್ತಿಗೆ ಬಂದಾಗ ಆಳೊಬ್ಬನು ಬಂದು ಕಾಗದ ಕೊಟ್ಟು ಹೋದನು. ಅದರಲ್ಲಿ "ಮಹಮ್ಮದ್ ಹಾಜಿಯವರ ಮಗಳು ನಫೀಸಳ ಮೂರು ತಲಾಖ್‌ಗಳನ್ನು ಈ ಮೂಲಕ ಹೇಳಿ ಅವಳನ್ನು ಬಿಡುಗಡೆ ಮಾಡಿದ್ದೇನೆ"[33] ಎಂಬ ಒಕ್ಕಣೆಯ ಕೆಳಭಾಗದಲ್ಲಿ ಹೆಬ್ಬೆಟ್ಟಿನ ಗುರುತೊಂದಿತ್ತು! ನಾಲ್ಕು ಜನ ಸಾಕ್ಷಿದಾರರ ಸಹಿಯೂ ಅದರಲ್ಲಿತ್ತು. ನಂತರ ಆಕೆಯು ತವರುಮನೆಯಲ್ಲಿ ತನ್ನ ಬದುಕನ್ನು ನಡೆಸುತ್ತಿರಬೇಕಾದರೆ ತಂದೆಯು ಆಕೆಗೆ ಮತ್ತೊಂದು ವಿವಾಹವನ್ನು ಮಾಡಲು ತೊಡಗಿದರು.

ನಫೀಸಾಳು 40 ವರ್ಷದ ಪ್ರಾಯದ ವ್ಯಕ್ತಿಯನ್ನು ಮದುವೆಯಾಗಿ ಆತನ ಕುಟುಂಬದಲ್ಲಿ ತನ್ನ ಶಕ್ತಿಗೆ ಅನುಗುಣವಾಗಿ ಕುಟುಂಬದ ನಿರ್ವಹಣೆಯನ್ನು ಮಾಡಿದಳು. ಆದರೆ ಅವರ ಮಗ ಹುಸೈನನ ಕುತಂತ್ರದಿಂದ ತಂದೆಯ ಆರೋಗ್ಯ ಸ್ಥಿತಿಯು ಹದಗೆಟ್ಟಾಗ ಅವರಿಂದ ತಲಾಖ್ ಕಾಗದ ಪತ್ರಕ್ಕೆ ಸಹಿ ಹಾಕಿಸಿಕೊಂಡು ನಫೀಸಾಳಿಗೆ ಕಾಗದವನ್ನು ಕಳುಹಿಸಿದರು. ನಫೀಸಾಳು ತನ್ನ ತಾಯಿಯ ದೇಹಸ್ಥಿತಿಯು ಸರಿಯಿಲ್ಲದೇ ಇರುವ ಕಾರಣ ಎರಡು ದಿನ ತವರು ಮನೆಗೆ ಹೋಗಿಬರುತ್ತೇನೆ. ಎಂದು ಅರೆ ಮನಸ್ಸಿನಿಂದ ಗಂಡನಿಗೆ ಹೇಳಿಬಂದಿದ್ದಳು. ಆದರೆ ತನ್ನ ಗಂಡನ ಮನೆಯಿಂದ ಕಾಗದ ಬಂದಾಗ ತನ್ನ ಪತಿಗೆ ಏನಾಯಿತೋ ಎಂದು ಚಿಂತಿಸತೊಡಗಿದಳು. ಆಗ ತಂದೆಯು ಮಗಳ ಮುಖವನ್ನು ನೋಡಿ "ನಿನ್ನ ಗಂಡ ಸತ್ತಿಲ್ಲ ಮಗೂ, ಅವರು ನಿನ್ನ ತಲಾಖ್ ಕಳಿಸಿದ್ದಾರೆ"[34] ಎಂದು ಅತ್ಯಂತ ನೋವಿನಿಂದ ನುಡಿದರು. ಆಕೆಯ ಮುಖ ಬಿಳಿಚಿಕೊಂಡಿತು. "ಹಾಂ.... ಎಂಬ ಉದ್ಗಾರ ಮಾತ್ರ ಆಕೆಯ ಬಾಯಿಂದ ಹೊರಟಿತು. ಕ್ಷಣಕಾಲದ ಬಳಿಕ, 'ಇಲ್ಲ ಅಬ್ಬಾ.... ಅದೆಲ್ಲ ಸುಳ್ಳು. ಮೂರು ವರ್ಷಗಳಿಂದ ವಾತರೋಗಿಯಾಗಿ, ಈಗ ಮಾತಿನ ಶಕ್ತಿಯನ್ನೇ ಕಳೆದುಕೊಂಡಿರುವ ಅವರು ಹೇಗೆ ತಲಾಖ್ ಹೇಳುತ್ತಾರೆ? ಎಂದು ತಂದೆಯೊಡನೆ ಪ್ರಶ್ನಿಸಿದಳು. ಉಸ್ಮಾನರು ತನ್ನ ತಲಾಖ್ ಕಳುಹಿಸಿದ್ದಾರೆಂದರೆ ಆಕೆಗೆ ಅದನ್ನು ನಂಬಲು ಸಾಧ್ಯವಾಗಲೇ ಇಲ್ಲ. ಇಂದೋ ನಾಳೆಯೋ ಇಹಲೋಕ ತ್ಯಜಿಸಲು ಸಿದ್ಧರಾದ ಅವರು ಈ ಕೊನೆಗಳಿಗೆಯಲ್ಲಿ ತನ್ನನ್ನು ತ್ಯಜಿಸಿದರೇ? ಎರಡೇ ದಿನಗಳಲ್ಲಿ ಬಂದುಬಿಡು ಎಂದು ಬಾರಿ ಬಾರಿಗೆ ಕೈಯಿಂದ ಸನ್ನೆ ಮಾಡಿ ತನ್ನೊಡನಂದವರು ಆ ಎರಡೇ ದಿನಗಳಲ್ಲಿ ಇಂತಹ ನಿರ್ಧಾರವನ್ನು ಹೇಗೆ ಕೈಗೊಂಡರು ಎಂದು ದುಃಖಿತಳಾದಳು.

ತಲಾಖ್ ಪಡೆದ ನಂತರ ಆಕೆ ತನ್ನ ತವರು ಮನೆಯಲ್ಲಿ ಹಾಗೂ ಸಮಾಜದಲ್ಲಿ ಹೇಗೆ ನಿಂದನೆಗಳಿಗೆ ಗುರಿಯಾಗಬೇಕಾಗುತ್ತದೆ. ಎಂಬುದಾಗಿ ತಿಳಿಯಬಹುದಾಗಿದೆ. ನಫೀಸಾಳು ಅಣ್ಣ ಮತ್ತು ಅತ್ತಿಗೆಗೆ ಆಕೆಯೊಂದು ಹೊರೆಯಾಗಿದ್ದಳು. ಮೂಡೂರಿನಲ್ಲಿ ಮನೆಯ ಯಜಮಾನಿಯಾಗಿ, ತಾಯಿಯಾಗಿ, ಅಜ್ಜಿಯಾಗಿ ಎಲ್ಲರಿಗೂ ಬೇಕಾದವಳಾಗಿದ್ದಳು. ಇಲ್ಲಿ ತವರು ಮನೆಯಲ್ಲಿ ಎಲ್ಲರಿಗೂ ಹೊರೆಯಾಗಿ, ಕೆಲಸದಾಳಿಗಿಂತ ಕಡೆಯಾದವಳಾಗಿದ್ದಳು. ಒಂದು ವೇಳೆ ವಿಧವೆಯಾಗಿ ಗಂಡಿನ

ಆಸ್ತಿಯಲ್ಲಿ ಪಾಲನ್ನಾದರೂ ಪಡೆದು ಬಂದಿದ್ದರೆ ಆಕೆಯನ್ನು ಎಲ್ಲರೂ ಗೌರವಿಸುತ್ತಿದ್ದರೇನೋ ಆದರೆ ಈಗ ಆಕೆ ಬಂದಿರುವುದು ಬರಿಗೈಯಿಂದ ಆಕೆಯ ಅಗತ್ಯಗಳನ್ನೆಲ್ಲ ತಂದೆ ಅಥವಾ ಅಣ್ಣನೇ ಪೂರೈಸಬೇಕಾಗಿತ್ತು. ಅತ್ತಿಗೆ ಆಕೆಗೆ ಕೇಳಿಸುವಂತೆಯೇ ಆಗಾಗ ಗೊಣಗುತ್ತಿದ್ದಳು. "ಹೆಣ್ಣು ಮಕ್ಕಳು ಒಮ್ಮೆ ವಿವಾಹವಾಗಿ ಹೋದ ಬಳಿಕ ಗಂಡನ ಮನೆಯಲ್ಲಿರಬೇಕು. ತವರಿಗೆ ಹೊರೆಯಾಗಿರಬಾರದು. ಗಂಡನಿಗೆ ಬೇಡವಾದೊಡನೆ ದನವನ್ನಟ್ಟಿದಂತೆ ತವರಿಗಟ್ಟಿ ಬಿಡುವುದು. ತವರಿನವರ ಮೇಲೆ ಹೊರೆ ಹೊರಿಸುವುದು. ಇದು ಎಂತಹ ನಿಯಮ?"[35] ಎಂದು ತಲಾಖ್ ಪಡೆದ ನಂತರ ಎಲ್ಲರ ತಿರಸ್ಕಾರಕ್ಕೆ ಗುರಿಯಾದ ನಫೀಸಾ ಮನದಲ್ಲೇ ತನ್ನ ಅಸ್ತಿತ್ವದ ಕುರಿತು ಪ್ರಶ್ನೆಯನ್ನು ಮಾಡಲು ತೊಡಗುವಳು.

### 5. ಪುನರ್ ವಿವಾಹದ ಬಗೆ :

ಮುಸ್ಲಿಂ ಸಮುದಾಯದಲ್ಲಿ ಗಂಡು ತನಗೆ ತಿಳಿದೋ ಅಥವಾ ತಿಳಿಯದೇ ಇರುವ ಸ್ಥಿತಿಯಲ್ಲಿ ತನ್ನ ಹೆಂಡತಿಗೆ ತಲಾಖ್ ಎಂದು ಒಮ್ಮೆಯೇ ಮೂರು ಬಾರಿ ಹೇಳಿ ಆಕೆಯಿಂದ ಬೇರೆಯಾಗಿ, ಪುನಃ ಆಕೆಯನ್ನು ಬಯಸಿದಾಗ ಗಂಡು ಯಾವ ರೀತಿಯ ನಿಯಮಗಳನ್ನು ಪಾಲಿಸಬೇಕಾಗಿಲ್ಲ. ಆದರೆ ಹೆಣ್ಣು ಮಾತ್ರ ತನ್ನ ಬದುಕಿನ ಉದ್ದಕ್ಕೂ ಮೌನವಾಗಿಯೇ ಎಲ್ಲವನ್ನೂ ಒಪ್ಪಿಕೊಳ್ಳುವಂತೆಯೇ ಇಸ್ಲಾಂ ಧರ್ಮದಲ್ಲಿ ಮೊದಲನೇ ಪತಿಯನ್ನು ವಹಿಸಬೇಕಾದರೆ ಆಕೆ ಪುನರ್ ವಿವಾಹದ ಬಗ್ಗೆ ಪುರುಷ ಪ್ರಧಾನ ಸಮಾಜವು ಉಲ್ಲೇಖಿಸುವ ರೀತಿಯಲ್ಲಿ ನಡೆದುಕೊಳ್ಳಬೇಕಾಗಿರುವುದು ಅನಿವಾರ್ಯತೆಯಾಗಿ ಕಂಡುಬರುತ್ತದೆ. ಹುಡುಗಿಯ ವಯಸ್ಸು 16 ವರ್ಷಕ್ಕಿಂತ ಕಡಿಮೆ ಪ್ರಾಯದವಳಾಗಿದ್ದರೆ ಅವಳ ಒಪ್ಪಿಗೆ ಇಲ್ಲದೆ ಅವಳ ತಂದೆಯೇ ನೆರವೇರಿಸಿ ಕೊಡಬಹುದು. ಆದರೆ ಎರಡನೆಯ ನಿಕಾಹ್‌ನ್ನು ಅವಳ ಒಪ್ಪಿಗೆ ಇಲ್ಲದೆ ಯಾರೂ ಮಾಡಿಕೊಡಲು ಸಾಧ್ಯವಿಲ್ಲ. ಮೌಲವಿಗಳೇ ಬಂದು ಅವಳ ಒಪ್ಪಿಗೆ ಪಡೆಯಬೇಕು. ಅವಳ ಅನುಮತಿ ದೊರೆತರೆ ಮಾತ್ರ ನಿಕಾಹ್ ಆಗುತ್ತದೆಯೇ ಹೊರತು, ತನಗಿಷ್ಟವಿಲ್ಲ ಎಂದರೆ ಆ ನಿಕಾಹ್ ಆಗುವುದಿಲ್ಲ. ಎಂಬಂತಹ ಪ್ರಕ್ರಿಯೆಯು ಇರುವುದನ್ನು ಗುರುತಿಸಬಹುದಾಗಿದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ತಂದೆಯ ಕುತಂತ್ರ, ಪ್ರತಿಷ್ಠೆಗೆ ಸಿಲುಕಿ ಗಂಡನಿಂದ ತಲಾಖ್‌ಗೆ ಒಳಪಟ್ಟ ನಾದಿರಾ ಚಿಂತಾಕಾರಳಾಗಿ ತನ್ನ ಆರೋಗ್ಯವನ್ನು ಹದಗೆಡಿಸಿಕೊಂಡಾಗ ತಂದೆ ಮಹಮ್ಮದ್ ಖಾನ್ ಗೆಳೆಯನೊಂದಿಗೆ "ನೀನು ಹೋಗಿ ಒಮ್ಮೆ ರಶೀದ್‌ನನ್ನು ನೋಡಿ ಬರುವೆಯಾ? ಅವನೂ ಈವರೆಗೆ ಬೇರೆ ಮದುವೆಯಾಗಿಲ್ಲವಂತೆ. ಅವನಿಗಿಷ್ಟವಿದ್ದರೆ ನಾದಿರಾಳನ್ನು ಪುನಃ ಅವನೇ ಮದುವೆಯಾಗಲಿ"[36] ಎಂದು ಹೇಳಿದನು. ಫಾತಿಮ್ಮಳಿಗೆ ಈ ವಿಷಯ ತಿಳಿದಾಗ "ಆದರೆ.... ಒಮ್ಮೆ ತಲಾಖ್ ಆದ ಮೇಲೆ ಇನ್ನೊಮ್ಮೆ ಅವನನ್ನೇ ಮದುವೆಯಾಗಬೇಕಾದರೆ ಅದೇನೊ ಧರ್ಮದ ಅಡಚಣೆ ಇದೆಯಂತಲ್ಲಾ? ಎಂದು ಗಂಡನೊಂದಿಗೆ ತಮ್ಮ ಸಂದೇಹವನ್ನು ವ್ಯಕ್ತ ಪಡಿಸಿದಳು.[37] ತಂದೆ ತಾಯಿಯ ತಾಯಿಗಳ ಮಾತುಗಳನ್ನು ಕೇಳಿಸಿಕೊಂಡ ನಾದಿರಾಳ ಸಹನೆಯು ಸಡಿಲವಾಗಿ "ಅಂದರೆ.... ಏನಿದೆ ಖುರ್‌ಆನಿನಲ್ಲಿ? ಅವಳಿಗರಿಯದಂತೆ ಅವಳ ಧ್ವನಿ ಉದ್ವೇಗ ಪೂರಿತವಾಗಿತ್ತು. ಈಗ ಮಹಮ್ಮದ್ ಖಾನ್ ಮೌಲವಿಗಳು[25] ಹೇಳಿದ್ದನ್ನು ವಿವರಿಸ ತೊಡಗಿದರು. "ನೋಡಮ್ಮ, ಖುರ್‌ಆನಿನಲ್ಲಿ ಏನಿದೆಯೆಂದರೆ ಒಮ್ಮೆ ಒಬ್ಬನು ತನ್ನ ಹೆಂಡತಿಯ ತಲಾಖ್‌ನ್ನು ಮೂರು ಸಲ ಹೇಳಿದರೆ ಅಲ್ಲಿ ಆ ಗಂಡ-ಹೆಂಡತಿಯ ಸಂಬಂಧ ಸಂಪೂರ್ಣ ಕೊನೆಗೊಂಡಿತು. ಪುನಃ ಅವರು ಬಂದಾಗ ಬೇಕಾದರೆ ಆಕೆ ಬೇರೊಬ್ಬನನ್ನು ಮದುವೆಯಾಗಿಲ್ಲದಿದ್ದರೆ ಒಂದು ದಿನಕ್ಕಾದರೂ ಒಬ್ಬನನ್ನು ಮದುವೆಯಾಗಬೇಕು: ಒಂದು ರಾತ್ರಿಯನ್ನು ಅವನೊಡನೆ ಕಳೆಯಬೇಕು. ಅವನಿಂದ ಆಕೆ ಗರ್ಭಿಣಿಯಾಗಿಲ್ಲ ಎಂದು ನಿಶ್ಚಯವಾದ ಮೇಲೆ ಆ ಮೊದಲ ಗಂಡನು ಅವಳನ್ನು ಮದುವೆಯಾಗಬಹುದು. ಇದು ನಮ್ಮ ಸಮಾಜ ರೂಪಿಸಿದ ನಿಯಮ. ಇದನ್ನು ಮೀರುವಂತೆಯೇ ಇಲ್ಲ 'ಮಗೂ' ಎಂದು ಹೇಳಿದನು. "ಮೊದಲಿನ ಗಂಡನನ್ನು ಪುನರ್ವಿವಾಹವಾಗಲು ಒಂದು ರಾತ್ರಿಗೆ ಓರ್ವನನ್ನು ವಿವಾಹವಾಗಬೇಕೆಂಬ ನಿಯಮವನ್ನು ಖುರ್‌ಆನ್ ವಿಧಿಸಿಲ್ಲ" ಎಂದು ಮಸೀದಿಯ ಖಾಜಿಯವರು ಪುನರ್‌ವಿವಾಹದ ಕುರಿತ ಸ್ಪಷ್ಟ ನಿಲುವುಗಳನ್ನು ವ್ಯಕ್ತಪಡಿಸುವರು. "ಇದೆಲ್ಲ ಈ ಮೂರ್ಖ ಗಂಡಸರು ತಮ್ಮ ಸೌಕಾರ್ಯಕ್ಕಾಗಿ ಕೈಗೊಂಡ ಉಪಾಯಗಳು" ಎಂದು ಆವೇಶದಿಂದಲೇ ಬೋಧಿಸಿದರು. ನಂತರ ಇನ್ನೊಂದು ಮಾತನ್ನು ಸೇರಿಸಿದರು. "ಆದರೆ ಒಮ್ಮೆಯೇ 'ತಲಾಖ್' ಎಂದು ಪಂಡಿತರ ಅಭಿಪ್ರಾಯ. ಅವರು ಪುನಃ ಒಂದಾಗಬೇಕಾದರೆ ಆಕೆ ಇನ್ನೊಬ್ಬನನ್ನು ವಿವಾಹವಾಗಲೇ ಬೇಕು. ಆ ಮದುವೆಯಲ್ಲಿ ಮಗುಜನಿಸಿದರೆ ಆ ಮಗುವಿಗೆ ಆ ಗಂಡನೇ ವಾರಸುದಾರನಾಗುತ್ತಾನೆ. ಮಗು

ಹುಟ್ಟುವವರೆಗೆ ಅವಳು ತನ್ನ ಮೊದಲಿನ ಗಂಡನನ್ನು ವರಿಸುವುದೂ ಸಾಧ್ಯವಿಲ್ಲ"[38] ಎಂದು ಹೇಳಿರುವ ಸಂಗತಿಯನ್ನು ತಿಳಿಯಬಹುದಾಗಿದೆ.

ರಶೀದ್ ಕೂಡಾ ನಾದಿರಾಳನ್ನು ಪುನಃ ಮದುವೆಯಾಗಲು ಯಾವ ರೀತಿಯ ನಿಯಮಗಳನ್ನು ಪಾಲಿಸಬೇಕೆಂದು ಕೇಳಲು ಮಸೀದಿಗೆ ಹೋಗಿ ಬಂದು ತಾಯಿಯೊಡನೆ "ನಾನು ಈ ದಿನ ನಮ್ಮ ಮೌಲವಿಗಳ ಬಳಿಗೆ ಹೋಗಿದ್ದೆ. ನಾನೇ ಇನ್ನೊಮ್ಮೆ ನಾದಿರಾಳನ್ನು ವಿವಾಹವಾಗಬೇಕಾದರೆ ಅವಳಿಗೆ ಇನ್ನೊಂದು ಮದುವೆಯಾಗಬೇಕೆಂತಲ್ಲ? ಅರ್ಥವಿಲ್ಲದ ಇಂತಹ ನಿಯಮಗಳಿಗೆಲ್ಲ ಬೆಂಕಿ ಹಚ್ಚಬೇಕು. ಬೆಂಕಿ! ಎನ್ನುತ್ತಾ ತಾನೇ ಕೆರಳಿ ಕೆಂಡವಾದನು. ಮಗನ ಉದ್ವೇಗವನ್ನು ಕಂಡ ಆಮಿನಮ್ಮ ಮಗನನ್ನು ಉಪದೇಶಿಸ ತೊಡಗಿದಳು. "ಸಹನೆ ತಂದುಕೊ ಮಗಾ, ಧರ್ಮದ ನಿಯಮಗಳನ್ನು ಹಾಗೆಲ್ಲ ಅನ್ನಲು ಬಂದಿತೇ? ಪ್ರಶ್ನೆ ಕೇಳುವ ಹಕ್ಕು ನಮಗಿಲ್ಲ ಎಂದು ಮೌಲ್ವಿಯಾರರು 'ವಾಜ್'ನಲ್ಲಿ ಹೇಳಿದ್ದು ಕೇಳಲಿಲ್ಲವೇ? ನಾವು ಅನುಸರಿಸಿಕೊಂಡು ನಡೆಯಬೇಕಾವರೇ ಹೊರತು ಪ್ರಶ್ನೆ ಕೇಳಬೇಕಾದವರಲ್ಲ. ಧರ್ಮದ ಎಲ್ಲ ನಿಯಮಗಳಿಗೂ ಅರ್ಥವಿದ್ದೇ ಇರುತ್ತದೆ. ಈ ನಿಯಮವಿಲ್ಲದೇ ಹೋಗಿದ್ದರೆ ಈ ಮೂರ್ಖ ಗಂಡಸರು ತಮಗಿಷ್ಟವಿದ್ದಾಗಲೆಲ್ಲ ತಲಾಖ್ ನೀಡುತ್ತಾ ಮರುದಿನ ರಾಜಿ ಮಾಡಿಕೊಳ್ಳುತ್ತಾ ಏನೇನು ಮಾಡಿಕೊಳ್ಳುತ್ತಿದ್ದರೊ ಏನೊ, ಈ ಕಠಿಣ ನಿಯಮವಿರುವುದರಿಂದ ಗಂಡಸರು ತಲಾಖ್ ನೀಡುವಾಗ ಕೊಂಚವಾದರೂ ಯೋಚನೆ ಮಾಡುತ್ತಾರೆ...."[39] ಎಂದು ಗಂಡಸರು ಹೇಗೆ ನಿಯಮಗಳನ್ನು ತಮಗೆ ಬೇಕಾದ ಹಾಗೆ ರೂಪಿಸಿಕೊಳ್ಳುವರು ಎಂಬುದರ ಕುರಿತು ಆಮೀನಮ್ಮ ವಿಚಾರಗಳನ್ನು ತಿಳಿಸುವುದು ಕಂಡುಬರುತ್ತದೆ.

ನಾದಿರಾಗೆ ಮನೆಯಲ್ಲಿ ಯಾವ ಕೆಲಸಗಳನ್ನು ಮಾಡಲು ಸಾಧ್ಯವಾಗುತ್ತಿರಲಿಲ್ಲ. ಹೃದಯ ವಿರುದ್ಧ ಭಾವನೆಗಳ ರಣರಂಗವಾಗಿತ್ತು. ಪಾಪುವನ್ನು ನೋಡಿದಾಗಿನಿಂದ ಅವಳ ಮೆದುಳು ಬೇರೇನನ್ನೊ ಯೋಚಿಸುತ್ತಿರಲಿಲ್ಲ. ಕೊನೆಗೆ ಯೋಚಿಸಿ ಆಕೆ ಒಂದು ನಿರ್ಧಾರ ಕೈಗೊಂಡಳು. ತನ್ನ ಮಗನನ್ನು ಸೇರಲು, ಅವನಿಗಾಗಿ ಅವನ ತಂದೆಯನ್ನು, ತನ್ನ ಪ್ರಿಯ ಪತಿಯನ್ನು ಸೇರಲು ಒಬ್ಬನನ್ನು ಒಂದು ರಾತ್ರಿಗೆ ವಿವಾಹವಾಗಲು ಆಕೆ ನಿರ್ಧರಿಸಿದಳು. ಮಹಮ್ಮದ್ ಖಾನ್‌ರ ಗೆಳೆಯ ಕಾದಿರ್‌ನು ಬಾಗೋಡು ಗ್ರಾಮದ ಶೇಕಾಲಿಯನ್ನು ಭೇಟಿ ಮಾಡಿ ಹೊಸಬಟ್ಟೆ, ಒಂದಿಷ್ಟು ಹಣವನ್ನು ಕೊಟ್ಟು ಪುನರ್ ವಿವಾಹದ ಸುದ್ಧಿಯನ್ನು ತಿಳಿಸಿದರು. ಒಂದು ರಾತ್ರಿಗೆ ಆದರೂ ಒಂದು ಹೆಣ್ಣನ್ನು ವಿವಾಹವಾಗಲು ಈತನು ಸಿದ್ಧನಿದ್ದನು. ರಾತ್ರಿ ಇಶಾ ನಮಾಜಿನ ಬಳಿಕ ಊರೆಲ್ಲಾ ಮಲಗಿದ ಮೇಲೆ ಶೇಕಾಲಿ ಮದುಮಗನಾಗಿ ಬಂದನು. ಕಾದರ್ ಆತನನ್ನು ಕರೆದೊಯ್ದು ಮಸೀದಿಗೆ ಹೋಗಿ ಮೌಲವಿ ಮತ್ತು ಇನ್ನೊಬ್ಬನೊಡನೆ ಮಹಮ್ಮದ್ ಖಾನ್‌ರ ಮನೆಗೆ ಬಂದರು. ನಾದಿರಾ ಕೋಣೆಯಲ್ಲಿ ಮುಸುಕು ಬೀರಿ ಮಲಗಿದ್ದಳು. ಹೊರಗೆ ಧಾರಾಕಾರವಾಗಿ ಮಳೆ ಸುರಿಯುತ್ತಿತ್ತು. ಫಾತಿಮ್ಮ ಬಂದು ಮಗಳನ್ನೆಬ್ಬಿಸಿದರು. ಮೌಲವಿಗಳು ಕೋಣೆಯ ಬಾಗಿಲ ಬಳಿ ಬಂದು ಈ ನಿಖಾಹ್‌ಗೆ ನಾದಿರಾಳ ಒಪ್ಪಿಗೆಯನ್ನು ಕೇಳಿದರು. 'ಹೂಂ' ಎಂಬ ಸ್ವರ ಆಕೆಯ ಗಂಟಲಿನಿಂದ ಹೊರಡದಾಯಿತು. ನಾದಿರಾ ಕಷ್ಟಪಟ್ಟು 'ಹೂಂ' ಅನ್ನಬೇಕಾದರೆ ಕೆಲವು ನಿಮಿಷಗಳೇ ಹಿಡಿದವು. ಒಪ್ಪಿಗೆ ದೊರೆತ ಬಳಿಕ ಮೌಲವಿಗಳು ತೆರಳಿದರು. ನಿಕಾಹ್ ಅಂತೂ ಆಯಿತು. ಇನ್ನು ತಾನು ಆತನೊಡನೆ ಈ ರಾತ್ರಿಯನ್ನು ಕಳೆಯಬೇಕು. ಆಮೇಲೆ ಬೆಳಿಗ್ಗೆ ತಲಾಖ್ ಕೊಟ್ಟು ಆತನು ಹೊರಟು ಹೋಗುತ್ತಾನೆ. ಮತ್ತೆ ಮೂರು ತಿಂಗಳಾದ ಮೇಲೆ ರಶೀದ್‌ನೊಡನೆ ಮರು ಮದುವೆಯಾಗಬಹುದು ಎಂದು ಚಿಂತಿಸತೊಡಗಿದಳು. ಗಂಡು ಮಾಡಿದ ತಪ್ಪಿಗೆ ಯಾಕೆ ಈ ರೀತಿಯ ಶಿಕ್ಷೆಯೆಂದು ನಾದಿರಾಳು ಚಿಂತಿಸುತ್ತಾ ಶೇಕಾಲಿಯನ್ನು ನೋಡಿದ ಮೇಲೆ ಆಕೆ ಅರೆ ಜೀವವಾಗಿದ್ದಳು. ಧಾರ್ಮಿಕ ಸಂಕೇತವಾದ ಮಸೀದಿಯ ಬಳಿ ಬಂದು ಮಸೀದಿಯ ಕೊಳದಲ್ಲಿ ಧುಮುಕುವ ಮೂಲಕ ಹೆಣ್ಣಿನ ಮೇಲೆ ಆಗುವ ಶೋಷಣೆಯನ್ನು ಹತ್ತಿಕ್ಕುವ ಹಾಗೂ ಧರ್ಮದ ಸಂಕೇತವಾಗಿ ಹೇರಲ್ಪಟ್ಟ ನಿಯಮಗಳನ್ನು ಮೀರುವುದರ ಮೂಲಕ ಕೊನೆಯ ಗಳಿಗೆಯಲ್ಲಿ ತನ್ನ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳಲು ಧರ್ಮದ ಸಂಕೇತವಾದ ಮಸೀದಿಯನ್ನು ಆಯ್ಕೆ ಮಾಡಿಕೊಂಡಿದ್ದನ್ನು ಗಮನಿಸಬಹುದಾಗಿದೆ.

ಒಟ್ಟಾರೆ ಸಾರಾ ಅವರ ಕಾದಂಬರಿಗಳಲ್ಲಿ ಇಸ್ಲಾಂ ಧರ್ಮದ ಮದುವೆಯ ಕಲ್ಪನೆ ಗಂಡು-ಹೆಣ್ಣಿನ ಸಂಬಂಧದಲ್ಲಿ ಹೆಣ್ಣನ್ನು ವಿವಾಹ ಬಂಧನಕ್ಕೆ ಸೇರ್ಪಡಿಸಿ ಆಕೆಗೆ ಕೌಟುಂಬಿಕ ನಿರ್ವಹಣೆಯ ಹೊರೆಯನ್ನು ನೀಡುವುದರ ಜೊತೆಗೆ ವರದಕ್ಷಿಣೆ, ಬಾಲ್ಯವಿವಾಹ, ತಲಾಖ್, ಬಹುಪತ್ನಿತ್ವ ಎಂಬ ಪಿಡುಗಿನಿಂದ ಹೆಣ್ಣಿನ ಮಾನಸಿಕ ಹಿಂಸೆಯನ್ನು ನೀಡುತ್ತಾ, ಬೇರೊಬ್ಬ ಹೆಣ್ಣನ್ನು ವಿವಾಹವಾಗುವುದಲ್ಲದೇ, ತನ್ನ ಮೊದಲ ಹೆಂಡತಿಗೆ ತಲಾಖ್ ಎಂಬ ವಿಚ್ಛೇದನವನ್ನು ನೀಡುವುದರ ಮೂಲಕ ಹೆಣ್ಣಿನ ಬದುಕಿಗೆ ತಿರುವುಗಳನ್ನು ನೀಡುತ್ತಾ ಆಕೆ ತನ್ನ ಕುಟುಂಬದಲ್ಲಿ ಹಾಗೂ ಸಮಾಜದಲ್ಲಿಯೂ ಎಲ್ಲರ ನಿಂದನೆಗಳಿಗೂ ಗುರಿಯಾಗುತ್ತಾ ಬದುಕನ್ನು ನಡೆಸುವಳು ಎಂಬುದನ್ನು ತಿಳಿಯಬಹುದಾಗಿದೆ. ಹೆಣ್ಣು ಎಂದರೆ ದುಡಿಯುವ ಯಂತ್ರದಂತೆ ಮಾತ್ರ ಕಾಣುವ ಮನಸ್ಸುಗಳೊಂದಿಗೆ ಆಕೆ ಸಂವೇದನಾಶೀಲಳೂ ಹೌದು. ಅಸ್ತಿತ್ವವನ್ನು ಉಳಿಸಿಕೊಳ್ಳುವ ಬಗೆಯಿದೆ ಎಂಬುದನ್ನು ಅರಿಯದೆ ಈ ಪುರುಷ ಪ್ರಧಾನ ಸಮಾಜವು ಹೆಣ್ಣನ್ನು ಕೆಳದರ್ಜೆಯವಳಾಗಿ ನೋಡುವ ಬಗೆಯು ಕಂಡುಬರುತ್ತದೆ.

**ಕೊನೆ ಟಿಪ್ಪಣಿಗಳು**

1. ಡಾ। ಸಾರಾ ಅಬೂಬಕ್ಕರ್ : ವಜ್ರಗಳು, ಪುಟ – 10
2. ಕೆ.ಷರೀಫಾ: ಮುಸ್ಲಿಂ ಸಂವೇದನೆ, ಪುಟ–54
3. ಡಾ.ಡಿ.ಮಂಗಳಾ ಪ್ರಿಯದರ್ಶಿನಿ: ಸ್ತ್ರೀವಾದ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ, ಪುಟ–70
4. ಡಾ। ಸಾರಾ ಅಬೂಬಕ್ಕರ್ : ಚಂದ್ರಗಿರಿ ತೀರದಲ್ಲಿ, ಪುಟ – 08
5. ಅದೇ, ಪುಟ – 40
6. ಡಾ। ಸಾರಾ ಅಬೂಬಕ್ಕರ್ : ಸಹನಾ, ಪುಟ – 31
7. ಅದೇ, ಪುಟ–32
8. ಡಾ। ಸಾರಾ ಅಬೂಬಕ್ಕರ್ : ವಜ್ರಗಳು, ಪುಟ–41
9. ಅದೇ, ಪುಟ–58
10. ಅದೇ, ಪುಟ–62
11. ಅದೇ, ಪುಟ–67
12. ಚ.ನ.ಶಂಕರ್‌ರಾವ್ : ಸಮಾಜಶಾಸ್ತ್ರ, ಪುಟ–192
13. ಕೆ.ಷರೀಫಾ: ಮುಸ್ಲಿಂ ಮಹಿಳಾ ಸಂವೇದನೆ, ಪುಟ–147

14. ಅದೇ, ಪುಟ–150
15. ಡಾ। ಸಾರಾ ಅಬೂಬಕ್ಕರ್ : ಚಂದ್ರಗಿರಿ ತೀರದಲ್ಲಿ, ಪುಟ–39
16. ಸಾರಾ ಅಬೂಬಕ್ಕರ್: ಸಹನಾ, ಪುಟ–31
17. ಅದೇ, ಪುಟ–42
18. ಅದೇ, ಪುಟ–53
19. ಅದೇ, ಪುಟ–155
20. ಅದೇ, ಪುಟ–180
21. ಅದೇ, ಪುಟ–194
22. ಡಾ। ಸಾರಾ ಅಬೂಬಕ್ಕರ್ : ವಜ್ರಗಳು, ಪುಟ–45
23. ಅದೇ, ಪುಟ–67
24. ಡಾ। ಸಾರಾ ಅಬೂಬಕ್ಕರ್ : ಚಂದ್ರಗಿರಿ ತೀರದಲ್ಲಿ, ಪುಟ–55
25. ಅದೇ, ಪುಟ–65
26. ಅದೇ, ಪುಟ–96
27. ಡಾ। ಸಾರಾ ಅಬೂಬಕ್ಕರ್ : ಸಹನಾ, ಪುಟ–200
28. ಅದೇ, ಪುಟ–144
29. ಅದೇ, ಪುಟ–151
30. ಅದೇ, ಪುಟ–162
31. ಡಾ। ಸಾರಾ ಅಬೂಬಕ್ಕರ್ : ವಜ್ರಗಳು, ಪುಟ–48
32. ಅದೇ, ಪುಟ–69
33. ಅದೇ, ಪುಟ–106
34. ಅದೇ, ಪುಟ–110
35. ಅದೇ, ಪುಟ–71
36. ಡಾ। ಸಾರಾ ಅಬೂಬಕ್ಕರ್ : ಚಂದ್ರಗಿರಿ ತೀರದಲ್ಲಿ, ಪುಟ–52
37. ಅದೇ, ಪುಟ–54
38. ಅದೇ, ಪುಟ–58
39. ಅದೇ, ಪುಟ–66

## ಅಧ್ಯಾಯ-5

# ಸಾರಾ ಅಬೂಬಕ್ಕರ್‌ರೊಂದಿಗಿನ ಸಂವಾದ

**1. ನೀವು ಸಾಹಿತ್ಯದ ಕಡೆಗೆ ಆಸಕ್ತರಾಗಲು ಕಾರಣವೇನು?**

ನನ್ನ 'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿರುವ 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು' ಎಂಬ ನನ್ನ ಆತ್ಮಕತೆಯಲ್ಲಿ ತಿಳಿಸಿರುವೆನು. ಸಾಹಿತ್ಯದ ಒಲವು ಎಲ್ಲಾರಿಗೂ ಬರುವುದಿಲ್ಲ. ಇದು ರಕ್ತದಿಂದ ಬಂದಂತಹ ಗುಣ. ಆಗಿನ ಸಂದರ್ಭದಲ್ಲಿ ಹೊರಗೆ ಹೋಗಿ ಸಾಹಿತ್ಯವನ್ನು ಕಲಿಯುವಂತಹ ಅವಕಾಶವಿರಲಿಲ್ಲ. ನಮ್ಮ ತಂದೆಯವರು ಹೆಚ್ಚು ಪುಸ್ತಕಗಳನ್ನು ಓದುತ್ತಿದ್ದರು. ಇಂಗ್ಲೀಷ್ ಪುಸ್ತಕಗಳನ್ನು ಸಹ ತಂದು ಓದುತ್ತಿದ್ದರು. ನಾನು ಓದಿದ್ದು ಕನ್ನಡ ಮಾಧ್ಯಮದಲ್ಲಿ ಆದುದರಿಂದ ಇಂಗ್ಲೀಷ್ ಓದಲು ಕಷ್ಟವಾಗುತ್ತಿತ್ತು. ಆಗ ಕನ್ನಡ ಮಾತೃಭಾಷೆಯಾಗಿ ಇದ್ದವರು ಕಡಿಮೆ. ಗ್ರಂಥಾಲಯದಿಂದ ತ್ರಿವೇಣಿಯವರ ಕಾದಂಬರಿಯನ್ನು ಓದುತ್ತಿರುವಾಗ ನಮ್ಮ ಮುಸ್ಲಿಂ ಸಮುದಾಯದ ಮಹಿಳೆಯರ ಸಮಸ್ಯೆಯ ಬಗ್ಗೆ ಗಮನ ಹರಿಸದೇ ಇರುವ ಕಾರಣ ಬರೆಯಲು ತೊಡಗಿದೆ. ಸಾಹಿತ್ಯವನ್ನು ಆಸಕ್ತಿಯಿಂದ ಬರೆದೆ ಅಂತ ಅಲ್ಲ. ನಮ್ಮ ಸಮುದಾಯದ ಮಹಿಳೆಯರ ಸಮಸ್ಯೆಯನ್ನು ಹೊರತರಲು ಬರೆದೆನೇ ಹೊರತು ಯಾವುದೇ ರೀತಿಯಲ್ಲಿ ಇಂದು ಹೇಳುವ ಹಾಗೆ ಪ್ರಶಸ್ತಿ, ಪ್ರಚಾರ, ಹಣಕ್ಕಾಗಿ ಖಂಡಿತವಲ್ಲ.

**2. ನಿಮ್ಮ ಕೃತಿಗಳ ಕೇಂದ್ರಬಿಂದು ಏನು?**

ಇದುವರೆಗಿನ ಎಲ್ಲಾ ಕಾದಂಬರಿಗಳು ಕಾಲ್ಪನಿಕವಾಗಿ ಬರೆದುದಲ್ಲ. ಕಾದಂಬರಿಯ ನಾಯಕಿಯ ಪಾತ್ರಗಳು ಇಂದಿಗೂ ಜೀವಂತವಾಗಿರುವುದು. ನಾನು ಕಂಡ, ಕಾಣಿದ, ತಿಳಿದ ವಿಷಯಗಳನ್ನು ವ್ಯಕ್ತಪಡಿಸಿದ್ದೀನಿ.

**3. ನಿಮ್ಮ ಕೃತಿಗಳು ಸ್ತ್ರಿ ಕೇಂದ್ರಿತ ಪರವಾಗಿ ಉಳಿಯುವುದಕ್ಕೆ ಕಾರಣವೇನು?**

ಮಹಿಳೆಯರು ಅನುಭವಿಸಿದ ಬುರ್ಕಾ ಪದ್ಧತಿ, ತಲಾಖ್, ಬಹುಪತ್ನಿತ್ವ, ಪುನರ್‌ವಿವಾಹದ ಕಲ್ಪನೆಯ ಸಮಸ್ಯೆಗಳ ಜೊತೆಗೆ ಕೋಮುವಾದ, ಕಳ್ಳಸಾಗಾಣಿಕೆ, ವರದಕ್ಷಿಣೆಯ ವಿಚಾರಗಳನ್ನು ಸಹ ವ್ಯಕ್ತಪಡಿಸಿದ್ದೀನಿ.

**4. ಮುಸ್ಲಿಂ ಸಮುದಾಯದ ಪರಂಪರೆ ಮತ್ತು ಆಧುನಿಕತೆಯ ಸಂಘರ್ಷಗಳು ನಿಮ್ಮ ಕೃತಿಗಳಲ್ಲಿ ಕಾಣಿಸುತ್ತದೆಯಲ್ಲವೆ ಹಾಗೂ ಎಲ್ಲೆಲ್ಲಿ ಚರ್ಚಿಸಿದ್ದಿರಿ.**

ಕಾದಂಬರಿಯಲ್ಲಿ ಪರಂಪರೆ ಮತ್ತು ಆಧುನಿಕತೆಯ ವಿಚಾರವನ್ನು ಬರೆಯಬೇಕಾದರೆ ಆಗಿನ ಪುರುಷ ಪ್ರಧಾನ ಸಮಾಜದ ಬದುಕಿನ ಮನಸ್ಥಿತಿಯನ್ನು ತೋರಿಸುವುದು ಮುಖ್ಯವಾಗಿರುತ್ತದೆ. ಪರಂಪರೆಯಲ್ಲಿ ಮೂಢನಂಬಿಕೆಗೆ ಸಿಲುಕಿ ಸಮಾಜದ ಜನರನ್ನು ಮೂಢನಂಬಿಕೆಗೆ ತಳ್ಳುವ ಪ್ರಯತ್ನ ಮಾಡುವರು. ಶಿಕ್ಷಣವನ್ನು ಪಡೆದರೆ ದೇವರ ಕೋಪಕ್ಕೆ ಗುರಿಯಾಗುವಿರಿ. ನರಕಕ್ಕೆ ಹೋಗುವಿರಿ ಎಂಬಂತಹ ವಿಚಾರಗಳನ್ನು ಬಿಂಬಿಸಲು ತೊಡಗಿದರು. ಅಲ್ಲದೆ ಬ್ರಾಹ್ಮಣರ ಶ್ಲೋಕವನ್ನು ಕೇಳಿ ದಲಿತರು ಉಚ್ಚಾರಿಸುವಾಗ ಅವರ ನಾಲಿಗೆಯನ್ನು ಸುಡುತ್ತಿದ್ದ ಸಂದರ್ಭದಲ್ಲಿ ಬ್ರಿಟಿಷರು ವ್ಯಾಪಾರದ ದೃಷ್ಟಿಯಲ್ಲಿ

ಬಂದು ಶಿಕ್ಷಣದ ವ್ಯವಸ್ಥೆಯನ್ನು ಬದಲಾಯಿಸಿದರು. ಜೊತೆಗೆ ಪರಂಪರೆಯಲ್ಲಿ ಶೋಷಣೆಗೆ ಒಳಗಾದ ಮಹಿಳೆಯರು ಆಧುನಿಕಯೆಡೆಗೆ ಚಲಿಸಿದ ಬಗೆಯನ್ನು ಗುರುತಿಸಬಹುದಾಗಿದೆ.

**5. ನಿಮ್ಮ 70-80ರ ದಶಕದ ಬರವಣಿಗೆಯ ನಂತರ 3 ದಶಕಗಳ ಅಂತರದ ಬರವಣಿಗೆಯ ಸಂವೇದನೆಯಲ್ಲಿ ಬದಲಾವಣೆಯಾಗಿದೆಯೇ?**

ಮಹಿಳಾ ಸಮಸ್ಯೆ ಯಾವಾಗಲೂ ಒಂದೇ. ಈಗ ಅಲ್ಪಸ್ವಲ್ಪ ಬದಲಾವಣೆಯಾಗಿರಬಹುದು. ಅಮಿರ್ ಖಾನ್ ಟಿ.ವಿ ಚಾನೆಲ್ ಒಂದರಲ್ಲಿ ಹೆಣ್ಣು ಭ್ರೂಣ ಹತ್ಯೆ ಕುರಿತು ಸುದ್ಧಿಯನ್ನು ತಿಳಿಸುತ್ತಿದ್ದಾಗ ಕಂಡು ಬಂದ ದೃಶ್ಯವೆಂದರೆ ಶ್ರೀಮಂತ ಕುಟುಂಬದಲ್ಲಿ ಮಹಿಳೆ ಡಾಕ್ಟರ್, ಗಂಡ ಅರ್ಥೋಪೇಡಿಕ್ ಸರ್ಜನ್, ಅತ್ತೆ ನಿವೃತ್ತ ಪ್ರಾಂಶುಪಾಲರು ಇವರು ತಮ್ಮ ಸೊಸೆ ಎರಡು ಹೆಣ್ಣು ಮಗುವನ್ನು ಹೊಟ್ಟೆಯಲ್ಲಿರಬೇಕಾದರೆ ತೆಗೆಸಲು ಒಪ್ಪಿಗೆ ನೀಡದೇ ಇದ್ದಾಗ, ಹೆರಿಗೆಯಾಗಿ ಮನೆಗೆ ಬಂದ ಮೇಲೆ ಮಕ್ಕಳು ಒಂದುವರೆ ಕಿ.ಲೋ ಇದ್ದಾಗ ವೈದ್ಯರ ಬಳಿ ತೋರಿಸಲೆಂದು ಒಂದು ಮಗುವನ್ನು ಸೊಸೆಯು ಇಟ್ಟುಕೊಂಡು ಮಹಡಿಯಿಂದ ಕೆಳಗೆ ಇಳಿದು ಕಾರಿನ ಬಳಿ ಹೋದಳು. ಮತ್ತೊಂದು ಮಗುವನ್ನು ಅತ್ತೆಯು ಎತ್ತಿಕೊಂಡಿದ್ದಳು. ಸೊಸೆಯು ತನ್ನ ಕಣ್ಣಿನಿಂದ ಮರೆಯಾದ ಮೇಲೆ ಮೂರು ದಿನದ ಮಗುವನ್ನು ಬರೀ ನೆಲೆದಲ್ಲಿ ಇಟ್ಟು, ನಂತರ ಮಗುವನ್ನು ಕವರ್‌ನಿಂದ ಸುತ್ತಿ ಕಾಲಿನಿಂದ ಬಿದ್ದುಬಿಟ್ಟರು. ಟಿ.ವಿ ಚಾನೆಲ್‌ನಲ್ಲಿ 1 ಗಂಟೆಯಿಂದ 2 ಗಂಟೆಯವರೆಗೆ ತೋರಿಸಿದ್ದರು. ಡಾಕ್ಟರ್ ಆಗಿದ್ದರು ಕೂಡ ಈ ಸಮಾಜದಲ್ಲಿ ಎಷ್ಟರ ಮಟ್ಟಿಗೆ ಮಹಿಳೆಯ ಮೇಲೆ ಶೋಷಣೆಯು ನಡೆಯುತ್ತಿದೆ ಎಂದು ತಿಳಿಯಬಹುದಾಗಿದೆ. ಮತ್ತೊಂದೆಡೆ ಹೆಣ್ಣಿಗೆ ಆರು ಸಲ ಗರ್ಭಪಾತ ಮಾಡುವರು. ಅವಳ ದೇಹ ಸ್ಥಿತಿಯ ಬಗ್ಗೆ ಗಮನವನ್ನು ವಹಿಸುತ್ತಿರಲಿಲ್ಲ. ಕೊನೆಗೆ ತನ್ನ ಗಂಡನಿಗೆ ತಿಳಿಯದೇ ಒಂದು ಹೆಣ್ಣು ಮಗುವನ್ನು ಉಳಿಸಿಕೊಂಡಾಗ ಮನೆಯಿಂದ ಹೊರಹಾಕಿದರು.

ಅಮೀರ್ ಖಾನ್ ಇಡೀ ದೇಶದ ಪ್ರವಾಸ ಮಾಡಿ ಎಲ್ಲಾ ಸಮುದಾಯದ ಮಹಿಳೆಯರು ಶಿಕ್ಷಣವನ್ನು ಪಡೆದು ಜಾಗೃತರಾಗಬೇಕು ಎಂದು ತಿಳಿಸಿದರು.

**6. ಕರಾವಳಿ ತೀರದ ಮುಸ್ಲಿಂ ಜನಾಂಗದ ಸ್ಥಿತಿಗತಿಯ ಬಗ್ಗೆ ನಿಮ್ಮ ಅಭಿಪ್ರಾಯವೇನು?**

ನನಗೆ ಅದರ ಕುರಿತು ಅಭಿಪ್ರಾಯವಿಲ್ಲ. ಕೇರಳದಲ್ಲಿ ಕಾಸರಗೋಡಿನ ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳು ಮನೆಯಿಂದ ಹೊರಗೆ ಬರುವಂತಿಲ್ಲ. ಸಮಾಜದ ನಿಯಮವನ್ನು ಕುರಿತು ಪ್ರಶ್ನೆ ಮಾಡುವ ಹಾಗಿಲ್ಲ. ಧರ್ಮದ ನಿಯಮಗಳನ್ನು ಪುರುಷ ಪ್ರಧಾನ ಸಮಾಜ ತಮಗೆ ಬೇಕಾದ ಹಾಗೆ ತಿರುಗಿಸಿಕೊಂಡಿರುವರು.

**7. ನಿಮ್ಮ ಕಾದಂಬರಿಯ ಶೀರ್ಷಿಕೆಯೂ ವಿಭಿನ್ನತೆಯಿಂದ ಕೂಡಿರುವಂತಹುದು. ಇದರ ಪ್ರಭಾವ ತಿಳಿಸಬಹುದೆ?**

'ಚಂದ್ರಗಿರಿ ತೀರದಲ್ಲಿ' ಕಾದಂಬರಿಗೆ ಈ ಶೀರ್ಷಿಕೆಯನ್ನು ಇಡಲು ಕಾರಣವೆಂದರೆ ಧರ್ಮದ ಸಂಕೇತವಾದ ನದಿಯನ್ನು ಮುಸ್ಲಿಂ ಸಮುದಾಯದ ಮಹಿಳೆಯರು ಒಬ್ಬಂಟಿಯಾಗಿ ದಾಟಲು ಸಾಧ್ಯವಾಗದೇ ಇರುವುದರಿಂದ ಈ ನಿಯಮಗಳನ್ನು ಹೇಗೆ ಹೆಣ್ಣಿನ ಮೇಲೆ ಹೇರಿರುವುದು ಎಂಬುದಾಗಿ ಬರೆದಿರುವೆನು. ಈ ಕಾದಂಬರಿಯನ್ನು ಮಲೆಯಾಳಂಗೆ ಭಾಷಾಂತರ ಮಾಡಿದಾಗ, ಪತ್ರಿಕೆಯವರು ಕಾದಂಬರಿಯ ನಾಯಕಿ ನಾದಿರಾಳು ನದಿಗೆ ಹಾರಿದಳು ಎಂದು ಬರೆದಾಗ ನಾನು ಕೆ.ಕೆ ನಾಯರ್

ಹತ್ತಿರ ನಾದಿರಾಳು ಮಸೀದಿಯ ಕೊಳಕ್ಕೆ ಹಾರುವ ಮುಖಾಂತರ ಧರ್ಮದ ನಿಯಮಗಳನ್ನು ಕ್ರಾಂತಿ ಮಾಡಿ ಪ್ರಶ್ನಿಸುವಳು ಎಂಬುದಾಗಿ ಭಾಷಾಂತರ ಮಾಡಿಸಿ ಬರೆಸಿದೆನು.

ಈ ಪುರುಷ ಪ್ರಧಾನ ಸಮಾಜವು ಧರ್ಮದ ನಿಯಮವನ್ನು ತಮಗೆ ಬೇಕಾದ ಹಾಗೆ ರೂಪಿಸಿಕೊಳ್ಳುವರು ಹೆಣ್ಣು ನದಿಗೆ ಹಾರಿದರೆ ಸಾಯುವಳು ಅವಳ ದೇಹ ಸಿಗುವುದಿಲ್ಲ. ಜೊತೆಗೆ ಹೆಣ್ಣು ಕಾಣದೇ ಹೋದರೆ ಪರಪುರುಷನೊಂದಿಗೆ ಓಡಿಹೋಗಿದ್ದಾಳೆ ಎಂದು ಹೇಳುವ ಮನಸ್ಥಿತಿಯು ಕಂಡುಬರುತ್ತದೆ.

'ಸಹನಾ' ಕಾದಂಬರಿ ಧಾರವಾಹಿಯಾಗಿ ಪ್ರಕಟಗೊಳ್ಳತೊಡಗಿತ್ತು. ಇದಕ್ಕೆ ನಾನು 'ಕ್ಷಮಯಾ ಧರಿತ್ರೀ' ಎಂದು ಹೆಸರು ಕೊಟ್ಟಿದ್ದೆ. ಲಂಕೇಶರು 'ಸಂಸ್ಕೃತ ಹೆಸರು ಬೇಡ. ಕನ್ನಡ ಹೆಸರೇ ಇರಲಿ ಎಂದು ಸಹನಾ ಹೆಸರು ಕೊಟ್ಟರು. ತಾಯಿ ಮಗುವಿನ ಸಂಬಂಧ ಅನ್ಯೋನ್ಯತೆಯಿಂದ ಕೂಡಿರುವಂತಹುದು. ಮನೆಯಲ್ಲಿ ಒಲೆ ಉರಿಯದಿದ್ದರೆ ಸಹಿಸುವಳು. ಆದರೆ ಮಗುವೂ ಹಸಿವಿನಿಂದ ಬಳಲುತ್ತಿದ್ದರೆ, ಗಂಡ ಮತ್ತೊಬ್ಬ ಹೆಣ್ಣಿನೊಂದಿಗೆ ಸಂಬಂಧವನ್ನು ಬೆಳೆಸಿದರೆ ಸಹಿಸುವುದಿಲ್ಲ ಎಂಬ ವಿಚಾರಗಳನ್ನು ಒಳಗೊಂಡಿದೆ.

'ವಜ್ರಗಳು' ಕಾದಂಬರಿಯನ್ನು ಬರೆಯಲು ಕಾರಣವೆಂದರೆ ಮುಸ್ಲಿಂ ಸಮುದಾಯದ ಮೌಲವಿಗಳು ಭಾಷಣ ಮಾಡುವ ಸಂದರ್ಭದಲ್ಲಿ "ನಮ್ಮ ಸಮುದಾಯದ ಹೆಣ್ಣು ಮಕ್ಕಳನ್ನು ಹೂವಿನಂತೆ, ವಜ್ರದಂತೆ" ಕಾಪಾಡುತ್ತೇವೆ ಎಂದು ಹೇಳಿದರು. ತಲಾಖ್‌ಗೆ ಒಳಪಟ್ಟ ಹೆಣ್ಣು ಕುಟುಂಬದಲ್ಲಿ ಹಾಗೂ ಸಮಾಜದಲ್ಲಿ ಹೇಗೆ ನಿಂದನೆಗಳಿಗೆ ಗುರಿಯಾಗುವರು ಎಂಬ ನೆಲೆಯಿಂದ ಈ ಶೀರ್ಷಿಕೆಯನ್ನು ಇಟ್ಟೆ.

**8. ನಿಮ್ಮ ಕೃತಿಗಳ ಸ್ತ್ರೀ ಪಾತ್ರಗಳ ಮೌನವು ಶಕ್ತಿಯೋ, ದುರ್ಬಲವೋ.**

ಮುಸ್ಲಿಂ ಸಮುದಾಯದ ಬಡ ಕುಟುಂಬದಲ್ಲಿ ಬೆಳೆದ ಹೆಣ್ಣಿಗೆ ಎಳೆಯ ವಯಸ್ಸಿನಿಂದಲೇ ಸಂಪ್ರದಾಯದ ವಿಚಾರಗಳನ್ನು ಮನಸ್ಸಿನಲ್ಲಿ ಬಿತ್ತರಿಸುವರು. ಆದುದರಿಂದ ಧರ್ಮದ ನಿಯಮಗಳ ಕುರಿತು ಪ್ರಶ್ನೆಯನ್ನು ಮಾಡಲು ಸಾಧ್ಯವಿರದೇ ಇರುವುದರಿಂದ ಹೆಣ್ಣಿನ ಪಾತ್ರಗಳು ಮೌನಿ ಅಂತ ಅನಿಸುತ್ತೆ.

**9. ಮಧ್ಯಮ ವರ್ಗದ ಹೆಣ್ಣು ಈಗಲೂ ಕುಟುಂಬ ನಿರ್ವಹಣೆ ಮಾಡಲು ಬೀಡಿ ಕಟ್ಟುವ ಸ್ಥಿತಿಯಿದೆ ಅಲ್ಲವೆ.**

ಕೆಳವರ್ಗದ ಜನರು ಹಿಂದೆ ಬೀಡಿ ಕಟ್ಟುತ್ತಿದ್ದರು. ಬಹುಶಃ ಈಗ ಕಡಿಮೆಯಾಗಿರಬಹುದು. ಪುರುಷರು ಗಲ್ಫ್, ದುಬಾಯಿಗೆ ಹೋಗಿ ಹಣ ಕಳುಹಿಸಲು ತೊಡಗಿದರು ಅದೇ ಸಮಯದಲ್ಲಿ ಕಮ್ಯೂನಿಸ್ಟ್ ಪಕ್ಷದವರು ಬೀಡಿ ಕಟ್ಟುವ ಕಾರ್ಮಿಕರಿಗೆ ಬೀಡಿ ಕಟ್ಟಿದರೆ ಕ್ಯಾನ್ಸರ್ ಬರುತ್ತೆ ಎಂದು ಪ್ರಚಾರ ಮಾಡ ತೊಡಗಿದರು. ಬೀಡಿ ಕಟ್ಟುವುದು ಬದುಕಿನ ನಿರ್ವಹಣೆ ಅವಶ್ಯಕವಾಗಿತ್ತು. ಆದರೆ ಪ್ರಚಾರದ ನಂತರ ಬೀಡಿ ಕಟ್ಟಬೇಕೆ ಅಥವಾ ನಿಲ್ಲಿಸಬೇಕೆ ಎಂಬ ಗೊಂದಲದಲ್ಲಿ ಸಿಲುಕಿದರು.

**10. ಶಿಕ್ಷಣ ಎಂಬುದು ಹೆಣ್ಣಿಗೆ ಬಿಡುಗಡೆಯ ದಾರಿ ಎಂದು ನೀವು ಭಾವಿಸುತ್ತಿರಾ?**

ಮಾಯಿಂಗಾ ಮನೆತನದವರು ಮಸೀದಿ, ಶಾಲೆ, ಮದ್ರಾಸಗಳನ್ನೂ ಕಟ್ಟಿಸಿದರು. ಆಧುನಿಕ ಶಿಕ್ಷಣಕ್ಕೆ ಆದ್ಯತೆ ನೀಡಿದ ಪ್ರಪ್ರಥಮ ಮುಸ್ಲಿಂ ಮನೆತನ ಇದಾಗಿತ್ತು. ನನ್ನ ತಂದೆಯ ಒಂದೇ ಒಂದು ಮಹತ್ವಾಕಾಂಕ್ಷೆ ಎಂದರೆ ನನ್ನನ್ನು ಮ್ಯಾಟ್ರಿಕ್ಯುಲೇಶನ್‌ವರೆಗೆ ಓದಿಸಬೇಕು ಎಂಬುದೇ ಆಗಿತ್ತು. ನನಗೆ ಶಿಕ್ಷಣ ನೀಡಿಯೇ ಊರಿನ ಮುಸ್ಲಿಂ ಹೆಣ್ಣು ಮಕ್ಕಳಿಗೆ ಮಾರ್ಗದರ್ಶನ ನೀಡುವುದು ಅವರ ಗುರಿಯಾಗಿತ್ತು.

" ವಿದ್ಯೆ ಇಲ್ಲದ, ಶಾಲೆಗೆ ಹೋಗದ ಹುಡುಗಿಯನ್ನು ನಾನು ಮದುವೆಯಾಗುವುದಿಲ್ಲ. ಕಾಲೇಜಿಗೆ ಹೋಗದ ಹುಡುಗಿ ನನಗೆ ಬೇಡ" ಎಂದು ಹೇಳಿದ ನನ್ನಣ್ಣನ ಈ ದೃಢ ನಿರ್ಧಾರದಿಂದ ನಮ್ಮೂರಿನ ಮುಸ್ಲಿಮರು ತಮ್ಮ ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸತೊಡಗಿದರು! ವಿದ್ಯಾವಂತ ಅಳಿಯ ದೊರೆಯಬೇಕಾದರೆ ಹೆಣ್ಣು ಮಕ್ಕಳು ವಿದ್ಯಾವಂತರಾಗಬೇಕು ಎಂಬಂತಹ ವಾತಾವರಣ ನಿರ್ಮಾಣವಾಯಿತು.

ನನ್ನ ಬದುಕಿನಲ್ಲಿ ನಡೆದ ಸಂಗತಿಗಳು ವಾತಾವರಣದ ಸಂಗತಿಗಳೇ ಸ್ತ್ರೀ ಶಿಕ್ಷಣದ ಬಗೆಗೆ ಇರುವ ಕಾಳಜಿಯಾಗಿದೆ.

**11. ಧಾರ್ಮಿಕ ನಂಬಿಕೆಗಳು ಮತ್ತು ಮುಸ್ಲಿಂ ಸಮುದಾಯದ ಬಗೆಗೆ ನಿಮ್ಮ ನಿಲುವೇನು?**

ಮುಸ್ಲಿಂ ಸಮುದಾಯದಲ್ಲಿ ಧಾರ್ಮಿಕ ನಂಬಿಕೆಯನ್ನು ಪುರುಷ ಪ್ರಧಾನ ಸಮಾಜವು ತಮಗೆ ಬೇಕಾದ ರೀತಿಯಲ್ಲಿ ರೂಪಿಸಿದೆ. ಧಾರ್ಮಿಕ ಕಾರ್ಯಕ್ರಮ ಮತ್ತು ಮತಾಂತರವನ್ನು ತೆಗೆದುಕೊಂಡಾಗ ಹಲವು ವಿಚಾರಗಳು ಗೋಚರಿಸುತ್ತವೆ.

ಮುಸ್ಲಿಂರಲ್ಲಿ ಹೆಣ್ಣು ಮಕ್ಕಳ ಕಿವಿ ಚುಚ್ಚುವುದೂ ಒಂದು ಸುನ್ನತ್ (ಧಾರ್ಮಿಕ) ಕಾರ್ಯಕ್ರಮ. ಅದಕ್ಕೆ ಒಂದು ಧಾರ್ಮಿಕ ಹಿನ್ನೆಲೆ ಇದೆ.

ಪ್ರವಾದಿ ಇಬ್ರಾಹೀಂ ಅವರ ಪತ್ನಿ ಸಾರಾ ಅವರಿಗೆ ಮಕ್ಕಳಾಗಿರಲಿಲ್ಲ. ಇದರಿಂದ ದುಃಖಿತರಾಗಿದ್ದ ಸಾರಾ ತನ್ನ ಗುಲಾಮ ಸ್ತ್ರೀ ಹಾಜಿರಾಳನ್ನು ಪ್ರವಾದಿಯವರಿಂದ (ತನ್ನ ಗಂಡನಿಂದ) ಮದುವೆ ಮಾಡಿಸಿದರು. ಹಾಜಿರಾ ಗರ್ಭಿಣಿಯಾದಾಗ ಸಾರಾಗೆ ಅಸೂಯೆಯಾಗತೊಡಗಿತು. ಆದುದರಿಂದ ಹಾಜಿರಾಳನ್ನು ನೋಯಿಸಬೇಕೆಂದು ಸಾರಾ ಹಾಜಿರಾಳ ಕಿವಿಚುಚ್ಚಿದರು. ಹೀಗೆ ಮಾಡಿದ ಬಳಿಕ ಸಾರಾಗೆ ಪಶ್ಚಾತ್ತಾಪವಾಗತೊಡಗಿತು. ಬಳಿಕ ಸಾರಾ ಹಾಜಿರಾಳ ಕಿವಿಗೆ ವಜ್ರ, ವೈಡೂರ್ಯಗಳಿಂದ ಅಲಂಕೃತವಾದ ಆಭರಣಗಳನ್ನು ತೊಡಿಸಿದರು. ಆಗ ಹಾಜಿರಾಳನ್ನು ಈಗಲೇ ಮರುಭೂಮಿಯಲ್ಲಿ ಬಿಟ್ಟು ಬರಬೇಕೆಂದು ತಾಕೀತು ಮಾಡುತ್ತಾರೆ. ಆಗ ಪ್ರವಾದಿಗಳು, "ಆಕೆಗೆ ಮಗು ಹುಟ್ಟಿದ ಬಳಿಕ ಕರೆದೊಯ್ದು ಬಿಡುವೆ" ಎಂದು ಒಪ್ಪಿಕೊಂಡರು. ಮಗು ಹುಟ್ಟಿ ನಾಲ್ಕು ತಿಂಗಳಾದಾಗ ಸಾರಾ ಮತ್ತೊಮ್ಮೆ ಗಂಡನನ್ನು ಒತ್ತಾಯಿಸಿ ಹಾಜಿರಾ ಮತ್ತು ಇಸ್ಮಾಯಿಲರನ್ನು ಮರುಭೂಮಿಯಲ್ಲಿ ಬಿಟ್ಟು ಬರಲು ಒಡಂಬಡಿಸಿದದರು. ಹಾಗೆ ಹಾಜಿರಾ ಮತ್ತು ಇಸ್ಮಾಯಿಲರು ಬದುಕಿದ ಒಡಂಬಡಿಸಿದರು. ಹಾಗೆ ಹಾಜಿರಾ ಮತ್ತು ಇಸ್ಮಾಹಿಲರು ಬದುಕಿದ ಸ್ಥಳ ಮಕ್ಕಾ. ಬಹಲ ವರ್ಷಗಳ ಬಳಿಕ ಅಲ್ಲಿಗೆ ಬಂದ ಇಬ್ರಾಹೀಮರು ಅಲ್ಲೇ ಉಳಿದು ದೈವಾಜ್ಞೆಯಂತೆ ಕಾಬಾ ಕಟ್ಟಡವನ್ನು ಕಟ್ಟಿಸಿದರೆಂಬುದು ಇತಿಹಾಸ ಮುಸ್ಲಿಂಮರ ಕಡ್ಡಾಯ ಧಾರ್ಮಿಕ ಕ್ರಮಗಳಲ್ಲಿ ಕೊನೆಯದಾದ ಹಜ್ ಯಾತ್ರೆಯೂ ಆಗಲೇ ಪ್ರಾರಂಭವಾಯಿತು. ಹಾಜಿರಾಳ ಈ ಕಿವಿ ಚುಚ್ಚಿದ ನೆನಪಿಗಾಗಿ ಇಂದು ಮುಸ್ಲಿಂ ಹೆಣ್ಣು ಮಕ್ಕಳ ಕಿವಿ ಚುಚ್ಚುವುದು ಕಂಡುಬರುತ್ತದೆ.

ಗೋಪಾಲನೆಂಬುವನು ಓದು ಬರಹ ಬಲ್ಲವನಾಗಿದ್ದನು. ನನ್ನ ಅಜ್ಜನ ಬಳಿಯಿದ್ದ ಧಾರ್ಮಿಕ ಕೃತಿಗಳೆಲ್ಲವನ್ನು ಓದುವ ಅಭ್ಯಾಸ ಮಾಡಿಕೊಂಡನು. ದಿನಾಲೂ ಕೆಲಸ ಮುಗಿಸಿ ರಾತ್ರಿ ಜಗಲಿಯ ಕಟ್ಟೆಯಲ್ಲಿ ಮಲಗುವವರೆಗೆ, ಗ್ರಂಥಗಳನ್ನು ಓದುತ್ತಿದ್ದನು. ಧರ್ಮದ ಕುರಿತು ಅಜ್ಜನೊಡನೆ ಚರ್ಚಿಸುತ್ತಲೂ ಇದ್ದನು. ಹೀಗೆ ಒಂದು ವರ್ಷವಾಗುತ್ತಿದ್ದಂತೆ ಈತನಿಗೆ ಇಸ್ಲಾಂ ಧರ್ಮಕ್ಕೆ ಮತಾಂತರಗೊಳ್ಳಬೇಕೆಂಬ ಹಂಬಲ ಪ್ರಾರಂಭವಾಯಿತು. ಅಜ್ಜನೊಡನೆ ಈ ವಿಷಯ ಹೇಳಿದಾಗ ಅಜ್ಜ "ನೀನು ನಿನ್ನ ಊರಿಗೆ ಹೋಗಿ ನಿನ್ನ ತಂದೆ ತಾಯಿಗಳಿಗೆ ತಿಳಿಸಿ ಅವರ ಒಪ್ಪಿಗೆ ಪಡೆದು ಬಾ" ಎಂದು ಅವನನ್ನು ಊರಿಗೆ ಕಳುಹಿಸಿದರು. ಕೆಲವು ದಿನಗಳಲ್ಲಿ ಆತ ನನ್ನ ತಂದೆಗೆ ತಿಳಿಸಿದಾಗ, ಅವರು "ಅದನ್ನು ಮ್ಯಾಜಿಸ್ಟ್ರೇಟರಿಗೆ ತಿಳಿಸಿ ಅರ್ಜಿ ಹಾಕಿ ಅವರ ಒಪ್ಪಿಗೆ ಪಡೆದು ಮತಾಂತರ ಕೈಗೊಳ್ಳಬಹುದು" ಎಂದರು. ಹಾಗೆಯೇ ಆ ರೀತಿ ಜಿಲ್ಲಾಧಿಕಾರಿಗಳ ಒಪ್ಪಿಗೆ ಪಡೆದು ಆತನು ಮತಾಂತರಗೊಂಡು ಮುಸ್ಲಿಂಮನಾದನು. ಆತನಿಗೆ ಜಮಾಲುದ್ದೀನ್ ಎಂದು ಹೆಸರಿಟ್ಟರು. ಆತನು ದಿನಾಲೂ ತಪ್ಪದೆ ನಮಾಜ್ ಮಾಡುತ್ತಿದ್ದನು. ಶುಕ್ರವಾರ ಬೇಗನೆ ಮಸೀದಿಗೆ ಹೋಗಿ ನಮಾಜ್ ಮಾಡಲು ಸಾಲಿನಲ್ಲೇ ಸ್ಥಾನ ಹಿಡಿಯುತ್ತಿದ್ದನು. ಆತನು ತನ್ನ ಧಾರ್ಮಿಕ ನಂಬಿಕೆಗಳನ್ನು ಮಾತ್ರ ಬದಲಾಯಿಸಿದ್ದಾನೆ. ಆದರೆ ಈ ದೇಶದ ಪ್ರಜೆ ಎಂಬ ತನ್ನ ಸ್ಥಾನಕ್ಕೆ ಯಾವುದೇ ಚ್ಯುತಿಯನ್ನೂ ಉಂಟು ಮಾಡಿಲ್ಲ. ಆತನ ಮಕ್ಕಳೂ ವಿದೇಶಕ್ಕೆ ಹೋಗಿ ಡಾಲರ್ ಸಂಪಾದಿಸಿ ಈ ದೇಶಕ್ಕೇ ಕಳುಹಿಸುತ್ತಿದ್ದಾರೆ. ಆತನು ಈ ದೇಶದ ಸಂವಿಧಾನದಂತೆ ಧಾರ್ಮಿಕ ಸ್ವಾತಂತ್ರ್ಯವನ್ನು ಮಾತ್ರ ಬಳಸಿಕೊಂಡಿದ್ದಾನಷ್ಟೆ ಹೊರತು ಯಾವುದೇ ವಿಧದಲ್ಲೂ ಸಂವಿಧಾನವನ್ನು ಉಲ್ಲಂಘಿಸಿಲ್ಲ ಎಂದು ಹೇಳಲು ಈ ಘಟನೆಯನ್ನು ವಿವರಿಸಿದೆನಷ್ಟೆ. ಇಂದು ಮತಾಂತರದ ಕುರಿತು ಕೋಮುವಾದಿಗಳು ಜನಾಂಗೀಯ ದ್ವೇಷದ ಕಿಚ್ಚು ಹೊತ್ತಿಸಿ ಅಮಾಯಕರ ಮೇಲೆ ದೌರ್ಜನ್ಯವೆಸಗುವುದನ್ನು ಕಂಡು ಇದನ್ನು ಬರೆಯಬೇಕಾಯಿತು. ವ್ಯಕ್ತಿಯ ಧಾರ್ಮಿಕ ನಂಬಿಕೆಯ ಬದಲಾವಣೆಯಿಂದ ಆತನ ಸಹ ನಾಗರಿಕರಿಗಾಗಲಿ, ರಾಷ್ಟ್ರಕ್ಕಾಗಲಿ ಯಾವುದೇ ನಷ್ಟವೂ ಆಗುವುದಿಲ್ಲ ಎಂದಷ್ಟೇ ಹೇಳುತ್ತಿದ್ದೇನೆ.

(ಟಿಪ್ಪಣಿ: ಹೊತ್ತು ಕಂತುವ ಮುನ್ನ ಪುಟ ಸಂಖ್ಯೆ–25)

## 12. ಲಿಂಗತಾರತಮ್ಯದಿಂದ ಸಮುದಾಯ ಪಾರಾಗುವ ಬಗೆ ಹೇಗೆ?

ಈ ಲಿಂಗತಾರತಮ್ಯವನ್ನು ನಾನು ವಿರೋಧಿಸುತ್ತೇನೆ. ನಮ್ಮ ಕುಟುಂಬದಲ್ಲಿ ಹೆಣ್ಣು ಮಕ್ಕಳ ಮೇಲೆ ತಿರಸ್ಕಾರದ ಭಾವನೆಯಿಲ್ಲ. ತಾರತಮ್ಯವು ಇಲ್ಲ. ಅವರು ನಮ್ಮ ಬಳಿ ಬಹಳ ವರ್ಷ ಇರುತ್ತಾರೆಯೇ? ಮದುವೆಯಾಗಿ ಅವರ ಪಾಡಿಗೆ ಹೋಗುತ್ತಾರೆ. ಅವರನ್ನು ನೋಯಿಸಬಾರದು ಎಂಬು ಮನೋಭಾವನೆಯನ್ನು ಪಡೆದಿರುವುದು ತಿಳಿಯುತ್ತದೆ.

ಆಸ್ತಿಯ ಪಾಲಿನ ವಿಷಯಕ್ಕೆ ಬಂದಾಗ ಗಂಡು ಮಕ್ಕಳಿಗೆ ಎರಡು ಪಾಲಾದರೆ ಹೆಣ್ಣು ಮಕ್ಕಳಿಗೆ ಒಂದು ಪಾಲು ಆಸ್ತಿಯನ್ನು ಕೊಡಲೇಬೇಕು ಎಂದು ಪ್ರವಾದಿಗಳು ನಿಯಮ ರೂಪಿಸಿದ್ದು ಹೆಣ್ಣು ಮಕ್ಕಳಿಗೆ ವರದಾನವಾಗಿದೆ ಎಲ್ಲರೂ ಹಾಗೆ ನೀಡುವುದಿಲ್ಲವೆಂಬುದು ಬೇರೆ ಮಾತು.

ಪರಂಪರೆಯ ಸಂದರ್ಭದಲ್ಲಿ ಹೆಣ್ಣು ಶಿಕ್ಷಣ ಪಡೆಯಬಾರದು, ಮನೆಯಿಂದ ಹೊರಗೆ ಹೋಗಬಾರದೆಂಬ ನಿಯಮವನ್ನು ರೂಪಿಸಿದ್ದರು. ಆದರೇ ಇಂದು ನಮ್ಮ ಕುಟುಂಬದಲ್ಲಿ ಹೆಣ್ಣು ಮಕ್ಕಳು ಐ.ಎಫ್.ಎಸ್, ಟಿ.ಸಿ.ಹೆಚ್, ಎಂ.ಎ ಎಂಬಂತಹ ಉನ್ನತ್ತ ಶಿಕ್ಷಣವನ್ನು ಪಡೆದು ತಮ್ಮ ಅಧ್ಯಯನ ಕ್ಷೇತ್ರದಲ್ಲಿ ಬೆಳೆಯುತ್ತಿರುವುದು ಕಂಡುಬರುತ್ತದೆ.

ಹೆಣ್ಣು ಮಕ್ಕಳನ್ನು ದೇವರು ವರವಾಗಿ ಕೊಟ್ಟಿರುವನು. ಆದುದರಿಂದ ಭ್ರೂಣಹತ್ಯೆಯನ್ನು ಮಾಡಬಾರದು. ಹರಿಯಾಣ, ಪಂಜಾಬ್‌ಗಳಲ್ಲಿ ಗಂಡಿಗೆ ಹೆಣ್ಣು ಸಿಗುವುದು ಸಮಸ್ಯೆಯಾಗಿ ಮಾರ್ಪಟ್ಟಿದೆ. 1,000 ಗಂಡಿಗೆ 700 ಹೆಣ್ಣುಗಳು ಸಿಗುವಷ್ಟರ ಮಟ್ಟಿಗೆ ಸಮಸ್ಯೆಯಾಗಿ ಕಂಡುಬಂದಿದೆ. ಇದು ಎರಡು ವರ್ಷದಿಂದ ಶುರುವಾಗಿದೆ.

ಗಂಡು-ಹೆಣ್ಣೆಂಬ ಬೇಧ ಮಾಡದೆ ಸಮಾನವಾದ ದೃಷ್ಟಿಯಲ್ಲಿ ನೋಡಿಕೊಳ್ಳುವುದು ಮುಖ್ಯ.

**13. ಕುಟುಂಬದ ಆಯಾಮದ ಒಳಗೆ ಗಂಡು - ಹೆಣ್ಣಿನ ಪಾತ್ರದ ಶ್ರೇಣಿಕರಣದ ಬಗೆಗೆ ನೀವೇನು ಹೇಳುತ್ತೀರಿ.**

ಪುರುಷ ಪ್ರಧಾನ ಸಮಾಜವು ಧರ್ಮದ ನಿಯಮಗಳನ್ನು ತಮಗೆ ಬೇಕಾದ ರೀತಿಯಲ್ಲಿ ರೂಪಿಸಿಕೊಂಡು ಕೌಟುಂಬಿಕ ಚೌಕಟ್ಟಿನ ಒಳಗೆ ಹೆಣ್ಣನ್ನು ನಿಯಂತ್ರಿಸಲಾಗಿದೆ. ಕಾಲಬದಲಾವಣೆ ಆದ ಹಾಗೆ ಕೌಟುಂಬಿಕ ಚೌಕಟ್ಟಿನ ನಿಯಂತ್ರಣದಿಂದ ಹೊರಬಂದು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮುಂದುವರಿಯುವುದನ್ನು ಗುರುತಿಸಬಹುದಾಗಿದೆ.

**14. ಮುಸ್ಲಿಂ ಸಮುದಾಯದಲ್ಲಿ ಇರುವ ಸಂತಾನಹರಣ ಚಿಕಿತ್ಸೆ ನಿಷೇಧದ ಬಗೆಗೆ ನಿಮ್ಮ ಅಭಿಪ್ರಾಯವೇನು?**

ಸಂತಾನಣರಣ ಚಿಕಿತ್ಸೆ ನಿಷೇಧದ ಕುರಿತು ಪ್ರವಾದಿಗಳು ಏನು ಹೇಳಿಲ್ಲ. 50 ವರ್ಷಗಳ ಹಿಂದೆ ಹುದ್ದಿಕ್‌ರವರ ಮಕ್ಕಳು ಪ್ರಕೃತಿಯ ಪರಿಸ್ಥಿತಿಗೆ ಸಿಲುಕಿ ಹೆರಿಗೆಯ ಸಂದರ್ಭದಲ್ಲಿ ಸಾಯುತ್ತಿದ್ದವು. ಪ್ರವಾದಿಗಳ ರಕ್ತ ಸಂಬಂಧಿಗಳು ಶಿಯಾ, ಫಾತಿಮ್ಮ, ಆಲಿಗಳು ಜೊತೆಗೆ ಸುನ್ನಿಗಳಿಗೆ ಶಿಯಾರನ್ನು ಕಂಡರೆ ಆಗುತ್ತಿರಲಿಲ್ಲ.

ಸಂತಾನಹರಣ ಚಿಕಿತ್ಸೆ ಮಾಡಿದರೆ ನರಕಕ್ಕೆ ಹೋಗುವರು ಎಂಬ ಕಲ್ಪನೆಯನ್ನು ಪುರುಷ ಪ್ರಧಾನ ಸಮಾಜವು ರೂಪಿಸಿಕೊಂಡಿತೆ ಹೊರತು ಪ್ರವಾದಿಗಳು ಹೇಳಿದಲ್ಲ. ಇವರು ಎಷ್ಟು ಮಕ್ಕಳಾದರೂ ಇರಬಹುದು. ಎಂದು ಹೇಳಿದರು.

ನಮ್ಮಲ್ಲಿ ಏಳು ರೀತಿಯ ಮಹಾಪಾಪಗಳು ಇವೆ. ಅವುಗಳೆಂದರೆ,

1. ಕೊಲೆ
2. ಆತ್ಯಾಚಾರ
3. ಬಡ್ಡಿ ತೆಗೆದುಕೊಳ್ಳುವುದು
4. ವಿಧವೆ ಮಕ್ಕಳ ಆಸ್ತಿಯನ್ನು ಕಸಿದುಕೊಳ್ಳುವುದು
5. ವ್ಯಭಿಚಾರ – ಇತ್ಯಾದಿ.

**15. ಕಾಸರಗೋಡಿನಲ್ಲಿ ಹಿಂದುಳಿದ ಜನಾಂಗದವರಲ್ಲಿ ವಿವಾಹದ ಬಗೆಗೆ ಇರುವ ಕಲ್ಪನೆಯೇನು?**

ಮುಸ್ಲಿಂರು 'ನಿಕಾಹ್'ನ ಕ್ರಮವನ್ನು ಅನುಸರಿಸುವರು. ಮದುವೆಯ ಸಂದರ್ಭದಲ್ಲಿ ತಂದೆಗೆ ಅಧಿಕಾರವಿರುತ್ತದೆ ಹೊರತು ತಾಯಿಗೆ ಅಧಿಕಾರವಿರುವುದಿಲ್ಲ. ಮಗಳನ್ನು 'ಮೆಹರ್'ನ ರೂಪದಲ್ಲಿ ಗಂಡಿಗೆ ಒಪ್ಪಿಸುವರು. ಹೆಣ್ಣಿಗೆ ತಂದೆ ಇಲ್ಲದೆ ಹೋದರೆ ತಂದೆಯ ಕಡೆಯವರಿಂದ ಮದುವೆಯಾಗುವುದು, ಇವತ್ತಿನ ಸಂದರ್ಭದಲ್ಲಿ 'ನಿಕಾಹ್'ನ ನಾಮದಲ್ಲಿ ನಾನು ಮದುವೆಯಾದೆ ಎಂದು ಸಹಿ ಹಾಕಬಹುದು.

ಮುಸ್ಲಿಂರಲ್ಲಿ ಪದ್ಧತಿಯು ಇತ್ತು. ಹೊಸದಾಗಿ ಮದುವೆಯಾದ ಯುವಕರು ತಮ್ಮ ಹೆಂಡತಿಯ ಮನೆಗೆ ಜಾತ್ರೆಯ ಉಡುಗೊರೆ ಎಂದು ದೊಡ್ಡ ಬುಟ್ಟಿಗಳಲ್ಲಿ ಸಿಹಿ ತಿಂಡಿಗಳನ್ನೂ ಮಲ್ಲಿಗೆಯ ದೊಡ್ಡ ಚೆಂಡನ್ನೂ ಕಳುಹಿಸಿಕೊಡುತ್ತಿದ್ದರು.

ಮುಸ್ಲಿಂ ಮದುವೆಗಳೂ ಕೂಡಾ ರಾತ್ರಿಗಳಲ್ಲೇ ನಡೆಯುತ್ತಿದ್ದವು. ರಾತ್ರಿ ಒಂಭತ್ತು ಗಂಟೆಯ ಬಳಿಕ ಮದುವೆಗೆ ಹೋದರೆ ಹಿಂತಿರುಗುವಾಗ ಬೆಳಗಾಗುತ್ತಿತ್ತು. ಮದುವೆಗೆ ಹೋದ ಮಹಿಳೆಯರಿಗೆ ರಾತ್ರಿಯಲ್ಲಿ ಕುಚ್ಚಲಕ್ಕಿ ಅನ್ನ, ಮೀನಿನ ಸಾರು, ಮಾಂಸದ ಕರಿ ನೀಡಿದರೆ ಬೆಳಗಿನ ಜಾವದಲ್ಲಿ ಮತ್ತು ಸಣ್ಣಕ್ಕಿ ಅನ್ನ (ನೈಚೋರು) ಕೋಳಿ ಸಾರು, ಹುರಿದ ಇಡೀ ಕೋಳಿ, ಗೋಧಿ ಪಾಯಸ ಎಲ್ಲವನ್ನೂ ನೀಡಲಾಗುತ್ತಿತ್ತು. ರಾತ್ರಿಯಿಂದ ಬೆಳಗಿನವರೆಗೂ ಮಹಿಳೆಯರ ಹಾಡುಗಳೂ ಇರುತ್ತಿದ್ದವು. ಅತಿಥಿಗಳಿಗೂ ಹಾಡುಗಾರ್ತಿಯರಿಗೂ ಒಂದೆರಡು ಬಾರಿ ಚಹಾ ತಿಂಡಿಗಳ ಸರಬರಾಜು ಆಗುತ್ತಿತ್ತು.

**16. ಪುನರ್ ವಿವಾಹದ ಕುರಿತಂತೆ ಉಲ್ಲೇಖವಾಗಿರುವ ಅಂಶವು ಸತ್ಯವೇ?**

ಇಸ್ಲಾಂ ಧರ್ಮದಲ್ಲಿ ಪುನರ್ ವಿವಾಹದ ಬಗೆಗೆ ವ್ಯಕ್ತವಾಗಿರುವ ಸಂಗತಿಯು ಉಲ್ಲೇಖಿಸಿಲ್ಲ. ಪುರುಷ ಪ್ರಧಾನ ಸಮಾಜವು ಬದಲಾಯಿಸಿ ಕೊಂಡಿರುವುದು ಅಷ್ಟೇ.

**17. ಬಹುಪತಿತ್ವ ಹಾಗೂ ಬಹುಪತ್ನಿತ್ವ ಇವೆರಡರ ಕುರಿತು ಇಸ್ಲಾಂ ಧರ್ಮದಲ್ಲಿ ಹೇಳಲ್ ಪಟ್ಟಿರುವುದೇನು?**

ಬಹುಪತಿತ್ವವೆಂಬುದು ಮಹಾಭಾರತದ ಕಾಲದಲ್ಲಿ ಇತ್ತೇ ಹೊರತು. ನಮ್ಮಲ್ಲಿ ಇಲ್ಲ. ಆದರೆ ಬಹುಪತ್ನಿತ್ವ ನಮ್ಮ ಧರ್ಮದಲ್ಲಿ ಇದೆ. ಪ್ರವಾದಿಗಳು ಹೇಳಿರುವುದೇನೆಂದರೆ "ಯುದ್ಧದಲ್ಲಿ ಗಂಡನನ್ನು ಕಳೆದುಕೊಂಡ ವಿಧವೆಯನ್ನು ಮದುವೆಯಾಗಿ. ಅನಾಥ ಮಕ್ಕಳಿಗೆ ಆಸರೆಯಾಗಿ" ಎಂದು ಹೇಳಿರುವರು.

**18. ಲೈಂಗಿಕ ರಾಜಕಾರಣದ ಕುರಿತು ನಿಮ್ಮ ಅಭಿಪ್ರಾಯವೇನು?**

ಪಂಜಾಬ್‌ನಲ್ಲಿ ಹೆಣ್ಣು ಮಕ್ಕಳನ್ನು ವ್ಯಾಪಾರದ ದೃಷ್ಟಿಕೋನದಲ್ಲಿ ಮಾರಾಟವಾಗುತ್ತಿದೆ. ಇದು ಸಂವಿಧಾನಕ್ಕೆ ವಿರೋಧವಾದುದು. ಇದು ಹೆಣ್ಣಿನ ಮೇಲೆ ನಡೆಸುವ ಶೋಷಣೆಯಾಗಿದೆ. ಮುಸ್ಲಿಂ ಸಮುದಾಯದಲ್ಲಿ ಅನೈತಿಕತೆ ಇಲ್ಲ. ಆದರೆ ಬೇರೆಯವರು ಮಾಡಿರುವರು.

**19. 'ಇದ್ದತ್'ನ ಆಚರಣೆಯನ್ನು ಕುರಿತು ನೀವು ಕಂಡ ರೀತಿಯಲ್ಲಿ ತಿಳಿಸಿ.**

ಇದ್ದತ್‌ನ ಸಂದರ್ಭದಲ್ಲಿ 4 ತಿಂಗಳವರೆಗೆ ಮದುವೆಯನ್ನು ಆಗಬಾರದು. ಕಾರಣವೆಂದರೆ ಗರ್ಭಿಣಿಯಾಗಿರಬಹುದೆಂಬ ಕಾರಣದಿಂದ ಆ ಮಗು ಹುಟ್ಟುವವರೆಗೂ ಮದುವೆಯಾಗುವಂತಿಲ್ಲ. ಕೇರಳದಲ್ಲಿ ಈ ಆಚರಣೆಯು ಕಡಿಮೆಯಾಗಿದೆ. ಹೊರಗೆ ಬರಬಾರದು ಎಂಬ ನಿಯಮವಿಲ್ಲ. ಸಮಾಜವು ಇದಕ್ಕೆ ವಿರೋಧಿಸಿದೆ ಬದಲಾವಣೆಯನ್ನು ಒಪ್ಪಿಕೊಂಡಿದೆ.

ಮುಸ್ಲಿಂ ಸಂಪ್ರದಾಯದಂತೆ, ದೇವ ನಿಯಮಕ್ಕನುಗುಣವಾಗಿ ಪತಿ ತೀರಿಕೊಂಡ ನಂತರ ನಾಲ್ಕು ತಿಂಗಳು ಹತ್ತು ದಿನಗಳವರೆಗೆ 'ಇದ್ದತ್' ಆಚರಿಸಬೇಕು. ಈ ಆಚರಣೆ ಪತಿಯಿಂದ ತಲ್ಲಾಖಿತಳಾದ ಪತ್ನಿಗೂ ಇದ್ದು, ಅವಳೂ 'ಇದ್ದತ್' ಆಚರಿಸಬೇಕು ಎಂಬುದು ನಿಯಮ. ಗರ್ಭಿಣಿ ಆಗಿದ್ದ ಪಕ್ಷದಲ್ಲಿ ಮಗುವನ್ನು ಹೆತ್ತು ಹಾಲೂಡಿಸುವ ಅವಧಿಯನ್ನು 'ಇದ್ದತ್' ಅವಧಿಯೆಂದು ಪರಿಗಣಿಸಲಾಗುತ್ತದೆ.

"ನಿಮ್ಮಲ್ಲಿ ಯಾವನಾದರೂ ಪತ್ನಿಯನ್ನು ಬಿಟ್ಟು ತೀರಿಕೊಂಡರಿ ನಾಲ್ಕು ತಿಂಗಳು ಹತ್ತು ದಿವಸ ತಡೆದು ನಿಲ್ಲಲಿ. ಹಾಗೆ 'ಇದ್ದತ್'ನ ಕಾಲಾವಧಿ ಮುಗಿಸಿದ ನಂತರ ವಿವಾಹ ಮಾಡಿಕೊಂಡರೆ ನಿಮ್ಮ ಮೇಲೆ ಯಾವುದೇ ಆಕ್ಷೇಪವೂ ಇಲ್ಲ. ನೀವು ಮಾಡುತ್ತಿರುವುದರ ಬಗ್ಗೆ ಅಲ್ಲಾಹು ಸೂಕ್ಷ್ಮವಾಗಿ ತಿಳಿಯುವವನೇ ಆಗಿರುತ್ತಾನೆ." (ಕುರಾನ್,ಅಲ್ ಬಕರ್, 234)

(ಟಿಪ್ಪಣಿ: ಕೆ.ಷರೀಫಾ: ಮುಸ್ಲಿಂ ಮಹಿಳಾ ಸಂವೇದನೆ ಪುಟ–82,83)

**20. ಬುರ್ಕಾ ಪದ್ಧತಿಯ ಬಗ್ಗೆ ನಿಮ್ಮ ನಿಲುವೇನು?**

1400 ವರ್ಷಗಳ ಹಿಂದೆ ಮಧ್ಯಯುಗಿನ ಸಂದರ್ಭದಲ್ಲಿ ಕ್ರೂರಿಗಳಿದ್ದರು. ಜನರು ಹೊರಗೆ ಬಂದರೆ ಹಿಡಿದು ಅವರನ್ನು ಮನಸ್ಸಿಗೆ ಬಂದಂತೆ ಹಿಂಸಿಸುತ್ತಿದ್ದರು. ಮಕ್ಕಳ ಜನನದಲ್ಲಿ ಹೆಣ್ಣು ಮಗುವಾದರೆ ಗೋರಿಯಲ್ಲಿ ಜೀವಂತವಾಗಿ ಇಡುತ್ತಿದ್ದರು. ಅಲ್ಲಿಂದ ಶುರು ಮಾಡಿ ಸೌಂದರ್ಯವನ್ನು ಮರೆ ಮಾಡಿಕೊಳ್ಳಿ ಎಂದು ಹೇಳಿದರು. ಗಂಡಸರು ತಲೆಗೆ ಬಟ್ಟೆ ಹಾಕುವರು. ಮರುಭೂಮಿ ವಾತಾವರಣದಲ್ಲಿ ದೊಡ್ಡ ಬಿರುಗಾಳಿ ಹಾರಿ ಮುಖ, ಕಣ್ಣಿಗೆ ಹಾರುವುದು. ಆದುದರಿಂದ ಬಟ್ಟೆಯಿಂದ ಮುಖ ಮರೆ ಮಾಡಿಕೊಳ್ಳಲು ಬಟ್ಟೆ ಧರಿಸುತ್ತಿದ್ದರು. ಗಂಡಸರಿಗೆ ಅಧಿಕಾರ ಬಂದಾಗ ಬುರ್ಕಾ ಹಾಕಲೇ ಬೇಕು ಎಂದು ಕಡ್ಡಾಯ ಹಾಕಿದರು.

ಪ್ರವಾದಿಗಳು ಹೇಳಿರುವುದು ಏನೆಂದರೆ 'ನಿಮ್ಮ ರಕ್ಷಣೆಗೆ ಬಟ್ಟೆ ಧರಿಸಿ ಎಂದು ಮಾತ್ರ ಹೇಳಿರುವರು. ಅಷ್ಟೇ. ಬುರ್ಕಾವನ್ನು ಕಣ್ಣು ಕಾಣುವಷ್ಟು ಮಾತ್ರ ಧರಿಸುವುದರಿಂದ ಕಣ್ಣು ಮಂಜು ಆಗುವ ಸಾಧ್ಯತೆಯಿದೆ.

**21. 'ಸಹನಾ' ಕಾದಂಬರಿಯ ಮೂಲ ಹೆಣ್ಣು ನಾಯಕಿ ಸಹನಾ ಮರಣ ಹೊಂದುವಳು ಆದರೆ ನೀವು ಬದಲಾವಣೆ ಮಾಡುವುದಕ್ಕೆ ಹಿನ್ನೆಲೆ ಏನು?**

ನನ್ನ ತಾಯಿ ಹೇಳಿದ ಮಾತುಗಳು ಆಗಾಗ ನೆನಪಾಗುತ್ತಿತ್ತು. ಏನೆಂದರೆ 'ಅವಳು ಸಾಯುವವರೆಗಾದರೂ ಆತ ಇನ್ನೊಂದು ಮದುವೆಯಾಗಲು ಕಾಯಬಹುದಾಗಿತ್ತಲ್ಲ' ಆಕೆ ಮಾನಸಿಕವಾಗಿ

ಎಷ್ಟು ಹಿಂಸೆಯನ್ನು ಅನುಭವಿಸಿದಳು ಎಂಬ ಮಾತುಗಳು ನೆನಪಾಗುತ್ತಿತ್ತು. ಹೆಣ್ಣು ನಿಯಂತ್ರಣದಿಂದ ಹೊರ ಬಂದು ಆರ್ಥಿಕವಾಗಿ ಹೇಗೆ ಸ್ವಾವಲಂಬಿ ಬದುಕನ್ನು ನಡೆಸುವಳು ಎಂಬುದರ ನೆಲೆಯಿಂದ ಬದಲಾಯಿಸಿಕೊಂಡೆ.

**22. 'ತಲಾಖ್' ಹೇಳುವ ಬಗೆಯು ಈಗ ಮುಸ್ಲಿಂ ಸಮುದಾಯದಲ್ಲಿ ಬದಲಾವಣೆ ಆಗಿದೆಯೇ.**

1872ರಲ್ಲಿ ಪ್ರಥಮ ಬಾರಿಗೆ ಬ್ರಿಟಿಷ್ ವಸಾಹತುಗಾರರಿಂದ ಮುಸ್ಲಿಂ ವ್ಯಕ್ತಿ ನಿಯಮದ ಸ್ಥಾಪನೆಯಾಯಿತು. ಈ ವ್ಯಕ್ತಿ ನಿಯಮದಲ್ಲಿ ಹೆಣ್ಣು ವೈವಾಹಿಕ ಬಂಧನದಿಂದ ಮುಕ್ತಿ ಪಡೆಯಲು, ವಿಚ್ಛೇದನಗೊಳ್ಳಲು ಅವಕಾಶವೇ ಇರಲಿಲ್ಲ. ಗಂಡ ಎಂತಹ ಕ್ರೂರಿಯಾದರೂ ಆಕೆ ಆ ಗಂಡನೊಡನೆ ಬಾಳಲೇ ಬೇಕಾಗಿತ್ತು. ಕಳೆದ ಶತಮಾನದ 20ರ ದಶಕದಲ್ಲಿ ಕೆಲವು ಮುಸ್ಲಿಂ ಮಹಿಳೆಯರು ವಿಚ್ಛೇದನ ಪಡೆಯಲು ಮತಾಂತರಗೊಳ್ಳಲಾರಂಭಿಸಿದರು.

1939ರ ಮುಸ್ಲಿಂ ವ್ಯಕ್ತಿ ನಿಯಮದ ಪುನರಚನೆಯ ಸಂದರ್ಭದಲ್ಲಿ ಈ ಮೊಕದ್ದಮೆಯ ತೀರ್ಪಿನಂತೆ ಮುಸ್ಲಿಂ ಮಹಿಳೆಯರಿಗೆ ವಿಚ್ಛೇದನದ ಹಕ್ಕು ದೊರೆಯಿತು.

**23. ಗಂಡಿನ ಯಾಜಮಾನ್ಯದ ನೆಲೆಗಳನ್ನು ನಿಮ್ಮ ಕೃತಿಗಳಲ್ಲಿ ಹೇಗೆ ಚರ್ಚಿಸಿದ್ದಿರಿ.**

ಎಲ್ಲಾ ಕಾದಂಬರಿಗಳಲ್ಲೂ ವ್ಯಕ್ತವಾಗಿರುವುದು. ಗಂಡಿನ ಯಾಜಮ್ಯಾನದ ನಿಯಮದ ಕುರಿತು ಪ್ರಶ್ನೆಯಿದೆ. ಗಂಡಿನ ನಿಯಂತ್ರಣದಿಂದ ಹೊರಬಂದು ನಸೀಮ ಬದುಕನ್ನು ನಡೆಸುವ ಸಾಧ್ಯತೆಯು 'ಸಹನಾ' ಕಾದಂಬರಿಯಲ್ಲಿ ಕಂಡುಬರುವುದು.

**24. ಚಂದ್ರಗಿರಿ ತೀರದಲ್ಲಿ ಕಥೆಯು ಬ್ಯಾರಿ ಚಿತ್ರದ ಕಥೆಯು ಒಂದೇ ಆಗಿರುವುದರ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?**

ಕೋರ್ಟ್‌ನಲ್ಲಿ ತೀರ್ಮಾನವಾಗಬೇಕು. ಅವರು ಕಾದಂಬರಿಯ ವಿಷಯವನ್ನು ಕದ್ದಿಲ್ಲ ಎಂದಿದ್ದಾರೆ. ಆತ ಸಣ್ಣ ಕಥೆ ಬರೆದಿದ್ದೀನಿ ಪ್ರಕಟವಾಗಿಲ್ಲ ಎಂದಿದ್ದಾರೆ. ಮಂಗಳೂರು ಪ್ರದೇಶದಲ್ಲಿ ಚಿತ್ರೀಕರಣವಾಗಿದೆ. ಆತ ನನಗೆ ಒಂದು ಮಾತು ತಿಳಿಸಿಲ್ಲ. ನನ್ನನ್ನು ಕರೆದಿಲ್ಲ. ಎನ್.ಎಫ್.ಡಿ.ಎಸ್ ನವರು 2015ರವರೆಗೆ 'ಚಂದ್ರಗಿರಿ ತೀರದಲ್ಲಿ' ಕಾದಂಬರಿ ಆಧಾರಿತ ಚಿತ್ರವನ್ನು ಮಾಡಲು ಸಾಧ್ಯವಿಲ್ಲ ಎಂದು ಹೇಳಿರುವರು. ಬ್ಯಾರಿಗಳಿಗೆ ಕಳ್ಳತನ ಇದೆ. ಯಾರು ಯಾರಿಗೆ ಮೋಸ ಮಾಡಬಹುದು ಎಂದು ಕಾಯುವರು. ವಾರ್ತಾವಾಹಿನಿ, ಪತ್ರಿಕೆಯಲ್ಲಿ ಕದ್ದು ಸಿನಿಮಾ ಮಾಡಬಹುದು ಎಂದು ಹೇಳಿರುವರು.

ವಾರ್ತಾವಾಹಿನಿಯಲ್ಲಿ ಬ್ಯಾರಿ ಚಿತ್ರದ ಕುರಿತು ವಾದ–ವಿವಾದದ ವಿಚಾರವೆಂದರೆ: ಮುಸ್ಲಿಂ ಸಮುದಾಯದ 'ಚಂದ್ರಗಿರಿ ತೀರದಲ್ಲಿ' ಕೃತಿಯನ್ನು ಸಿನಿಮಾ ಮಾಡಿದೆ. ಲೇಖಕಿ ಒಪ್ಪಿಗೆ ಕೊಡದ ಕಾರಣಕ್ಕಾಗಿ ಅದನ್ನು ಕದ್ದು ಸಿನಿಮಾ ಮಾಡಿದೆ. ಇದು ಆರೋಗ್ಯಕರ ಬದಲಾವಣೆ ಎನ್ನುವುದನ್ನು ನಾವು ಗಮನಿಸಬೇಕು. ಚಂದ್ರಗಿರಿ ತೀರದಲ್ಲಿ ಕಾದಂಬರಿ ಎತ್ತಿದ ಪ್ರಶ್ನೆಗಳಿಗೆ ಸಿಕ್ಕಿದ ಉತ್ತರ ಇದು. ಆ ಕೃತಿಯನ್ನು ಸಮುದಾಯ ಸ್ವೀಕರಿಸುವ ಮನಸ್ಸನ್ನು ಹೊಂದಿದೆ. ಇಂತಹ ಸಂದರ್ಭದಲ್ಲಿ ಲೇಖಕಿ ಅದರ ಮೇಲೆ ಹಕ್ಕುಗಳನ್ನು ಸಾಧಿಸುತ್ತಾ, ಅವರನ್ನು ಟೀಕೆ ಮಾಡುವುದು ನನಗೆ ಕಾಲದ ವ್ಯಂಗ್ಯವಾಗಿ ಕಾಣುತ್ತದೆ. ಬ್ಯಾರಿ ಸಿನಿಮಾದ ನಿರ್ದೇಶಕ ಒಂದು ಸಣ್ಣ ಮಾರುಕಟ್ಟೆಯ ಭರವಸೆಯೂ ಇಲ್ಲದೆ ಲಕ್ಷಗಟ್ಟಲೆ ಹಣ ಹೂಡಿ ಆ

ಸಿನಿಮಾವನ್ನು ಮಾಡಿದ್ದಾನೆ. ಸಾರಾ ಅಬೂಬಕ್ಕರ್ ಹಕ್ಕು ಕೊಡಲಿಲ್ಲವೆಂದು ಅವನು ಕೈ ಚೆಲ್ಲಲಿಲ್ಲ. ಕದ್ದಾದರೂ ಅದನ್ನು ಮಾಡಿಯೇ ತೀರುತ್ತೇನೆ ಎಂದು ಹೊರಟ ಅವನ ಹುಂಬ ಸಾಹಸ ನನಗೆ ತುಂಬಾ ಹಿತವಾಗಿ ಕಾಣಿಸುತ್ತದೆ. (ಒಂದು ವೇಳೆ ಇದಕ್ಕೆ ಸ್ವರ್ಣಕಮಲ ಸಿಗದೇ ಇದ್ದಿದ್ದರೆ ಶಾಶ್ವತವಾಗಿ ಕಸದ ಬುಟ್ಟಿ ಸೇರುತ್ತಿತ್ತೇನೋ. ಯಾಕೆಂದರೆ ಮಂಗಳೂರಿನ ಥಿಯೇಟರ್‌ಗಳಲ್ಲೇ ಈ ಚಿತ್ರ ಎರಡು ವಾರ ಓಡಿಲ್ಲ.) ಇಂತಹ ಕಳವುಗಳು ವ್ಯಾಪಕವಾಗಿ ನಡೆಯಬೇಕಾಗಿದೆ.

ಅನಾರೋಗ್ಯ ಪೀಡಿತ ಜನರಿರುವ ಸಮಾಜದಲ್ಲಿ ಒಬ್ಬ ಒಂದು ಔಷಧಿಯನ್ನು ಕಂಡು ಹಿಡಿದಿದ್ದಾನೆ ಎನ್ನುವ ಒಂದೇ ಒಂದು ಕಾರಣಕ್ಕಾಗಿ, ಅದರ ಹಕ್ಕುಗಳು ತನ್ನದು ಮತ್ತು ತಾನು ಬಯಸಿದರೆ ಮಾತ್ರ ಅದನ್ನು ಕೊಡಬಲ್ಲೆ ಎನ್ನುವ ಸಂದರ್ಭದಲ್ಲಿ ಅದನ್ನು ಕದ್ದಾದರೂ ಅಗತ್ಯವಿರುವವರಿಗೆ ತಲುಪಿಸುವುದನ್ನು ಮನುಷ್ಯರೆನಿಸಿಕೊಂಡವರೆಲ್ಲರೂ ಸ್ವಾಗತಿಸುತ್ತಾರೆ ಎಂದು ತಿಳಿದಿದ್ದೇನೆ. ಇಂದು ಫಕೀರ್, ಬೊಳುವಾರು, ಸಾರಾ ಮೊದಲಾದವರ ಕತೆಗಳು ಬ್ಯಾರಿ ಭಾಷೆಯಲ್ಲಿ ನಾಟಕ, ಸಿನಿಮಾ, ಟಿ.ವಿ. ಧಾರಾವಾಹಿಯಾಗಿ ಬರಬೇಕು. ಅದಕ್ಕಾಗಿ ಅವರೊಂದಿಗೆ ಅನುಮತಿಯನ್ನು ಕೇಳಬೇಕು. ಕೊಡದಿದ್ದಲ್ಲಿ ಅವರ ಬೆನ್ನು ಬೀಳಬೇಕು. ಮತ್ತೂ ಕೊಡದಿದ್ದಲ್ಲಿ ಅದನ್ನು ಕದಿಯಬೇಕು.

ಈ ರೀತಿಯಾಗಿ 'ಚಂದ್ರಗಿರಿ ತೀರದಲ್ಲಿ' ಕಾದಂಬರಿ ಆಧಾರಿತ ಚಲನಚಿತ್ರ ಮಾಡಿದಾಗ ಇದರ ಕುರಿತು ನಡೆದ ವಿವಾದ ಸಂಗತಿಗಳು ಹೇಗೆ ವ್ಯಕ್ತಗೊಂಡಿದೆ ಎಂಬುದಾಗಿ ತಿಳಿಯಬಹುದಾಗಿದೆ.

(ಟಿಪ್ಪಣಿ: http://gujariangadi.blogspot.in/2012/03/blog-post_18.html)

**25. ನೀವು ಪ್ರಸ್ತುತ ಸಾಹಿತ್ಯದಲ್ಲಿ ಮೆಚ್ಚುವ ಲೇಖಕಿ ಯಾರು? ಏಕೆ?**

ಅದು ಬೇಡ, ಯಾಕೆಂದರೆ ಒಬ್ಬರಿಗೆ ಹೇಳಿದರೆ ಮತ್ತೊಬ್ಬರಿಗೆ ಕೋಪಬರುತ್ತದೆ.

**26. ಸಂಶೋಧಕರಿಗೆ ನೀವು ಹೇಳುವ ಸಂದೇಶವೇನು?**

ನಾನು ಸಂಶೋಧನೆಯನ್ನು ಮಾಡಿಲ್ಲ. ಆದರೂ ಕೂಡಾ ಸಂಶೋಧನಾ ವಿದ್ಯಾರ್ಥಿಗಳಿಗೆ ನನ್ನ ಸಂದೇಶವೆಂದರೆ "ಯಾರು ಪದವಿಗೋಸ್ಕರ ಸಂಶೋಧನೆಯನ್ನು ಮಾಡಬಾರದು. ಆಸಕ್ತಿಗೋಸ್ಕರ ಮಾಡಬೇಕು" ಎಂದು ಹೇಳುತ್ತೇನೆ.

# ಸಮಾರೋಪ

ಸಾರಾ ಅಬೂಬಕ್ಕರ್‌ರವರು 70-80 ರ ದಶಕದಲ್ಲಿ ದಕ್ಷಿಣ ಕನ್ನಡದ ಮುಸ್ಲಿಂ ಸಮುದಾಯದಿಂದ ಬಂದಂತಹ ಲೇಖಕಿ. ಇವರ ಚಂದ್ರಗಿರಿ ತೀರದಲ್ಲಿ, ಸಹನಾ, ವಜ್ರಗಳು ಕಾದಂಬರಿಗಳನ್ನು ಅನುಲಕ್ಷಿಸಿ ಇವುಗಳಲ್ಲಿ ಕಂಡುಬರುವ ಗಂಡಿನ ಯಾಜ್ಯಮಾನ್ಯದ ನೆಲೆಗಳನ್ನು ಧಾರ್ಮಿಕ, ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕವಾಗಿ ಹೆಣ್ಣಿನ ಮೇಲೆ ಹೇಗೆ ಶೋಷಣೆಯ ನೆಲೆಗಳಾಗಿ ಸ್ಥಾಪಿಸಲ್ಪಟ್ಟಿವೆ ಎಂಬುದಾಗಿ ಅಧ್ಯಯನವನ್ನು ಮಾಡಲಾಗಿದೆ. ವಸಾಹತೋತ್ತರ ಸಂದರ್ಭದಲ್ಲಿ ಮಹಿಳಾ ಸಮಸ್ಯೆ ತುಂಬಾ ಸಂಕೀರ್ಣವಾಯಿತು. ಮಹಿಳಾ ಸಮಸ್ಯೆಗೆ ಜಾಗತೀಕರಣ, ಕೋಮುವಾದ, ಜಾತಿ, ಮಾರುಕಟ್ಟೆ, ಪ್ರಾದೇಶಿಕ, ಕುಟುಂಬ ಎಲ್ಲವೂ ಮುಖ್ಯ ಕಾರಣಗಳು. ಮಹಿಳೆಯ ಅನನ್ಯತೆಯ ದೃಷ್ಟಿಯಿಂದ ಇವು ಪ್ರಮುಖ ಸಮಸ್ಯೆಗಳಾಗಿವೆ. ಸಾರಾ ಅವರ ಬರಹಗಳು ವಸಾಹತು ಕಾಲ ಮತ್ತು ವಸಾಹತೋತ್ತರ ಕಾಲದ ಸಮಸ್ಯೆಗಳ ಬಗ್ಗೆ ತಳೆದ ಮಹಿಳಾ ಪ್ರತಿಕ್ರಿಯೆಗಳಾಗಿವೆ. ಈ ಪ್ರತಿಕ್ರಿಯೆಗಳು ವಸಾಹತು ಸಂದರ್ಭದಲ್ಲಿ ಆಗ ಬರೆಯುತ್ತಿದ್ದ ಲೇಖಕಿಯರಿಗಿಂತ ಭಿನ್ನ. ದಕ್ಷಿಣ ಕನ್ನಡದ ಮುಸ್ಲಿಂ ಮಹಿಳೆಯರ ಕೇಂದ್ರ ಸಮಸ್ಯೆಯೆಂದರೆ 'ಅನಕ್ಷರತೆ', 'ಹೇರಲ್ಪಟ್ಟ ಸಾಂಪ್ರದಾಯಿಕತೆ' ಮತ್ತು 'ಬೌದ್ಧಿಕ ಬಡತನ' ಇದ್ದುದರಿಂದ ಸಾರಾ ಅವರು ತಮ್ಮ ಕಾದಂಬರಿಗಳಲ್ಲಿ ವ್ಯಕ್ತ ಪಡಿಸಿದ ಬಗೆಯನ್ನು ಗುರುತಿಸಬಹುದಾಗಿದೆ.

'ಧಾರ್ಮಿಕ ನಂಬಿಕೆಗಳು ಮತ್ತು ಮುಸ್ಲಿಂ ಸಮುದಾಯ' ಎಂಬ ಅಧ್ಯಾಯದಲ್ಲಿ ಪಾರಂಪರಿಕವಾದ ಮೌಲ್ಯಗಳನ್ನು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಪುರುಷ ಪ್ರಧಾನ ಸಮಾಜವು ಹೆಣ್ಣಿನ ಮೇಲೆ ನಿಯಮಗಳನ್ನು ಹೇರುತ್ತಾ, ದೈಹಿಕವಾಗಿ ಶೋಷಣೆ ಮಾಡುವ ಪರಿಯು ಕಂಡುಬರುತ್ತದೆ. ಅಲ್ಲದೇ ವಸ್ತ್ರಸಂಹಿತೆಯ ಮೂಲಕ ಹೆಣ್ಣಿನ ದೇಹವನ್ನು ಮರೆಮಾಡುವುದರ ಜೊತೆಗೆ ಆಕೆಯ ತಾಯ್ತನದ ಮೇಲೆ ಆಕೆಗೆ ಯಾವುದೇ ತೀರ್ಮಾನವನ್ನು ಕೈಗೊಳ್ಳದಂತೆ ಮಾಡುವ ಬಗೆಯು ವ್ಯಕ್ತಗೊಂಡಿದೆ.

'ಗಂಡಿನ ಯಾಜಮ್ಯಾನದ ನೆಲೆ'ಯಲ್ಲಿ ಪುರುಷನು ತನ್ನ ಅಧಿಕಾರದ ನೆಲೆಯನ್ನು ಕುಟುಂಬ ವಲಯದಲ್ಲಿ ಸ್ಥಾಪಿಸಲ್ಪಟ್ಟು, ಗಂಡು-ಹೆಣ್ಣೆಂಬ ತಾರತಮ್ಯವನ್ನು ಮಾಡುತ್ತಾ, ಹೆಣ್ಣಿನ ದೇಹದ ಮೇಲೆ ಆಕೆ ಯಾವ ಅಧಿಕಾರವು ಇರದ ಹಾಗೆ ಮಾಡಿ ಗಂಡಿನ ಆಸೆಗಳನ್ನು ತೀರಿಸುವಂತಹ ಯಂತ್ರದಂತೆ ಬಳಸಿಕೊಳ್ಳಲ್ಪಡುವ ಈ ಪುರುಷ ಪ್ರಧಾನ ಸಮಾಜವು ಹೆಣ್ಣಿನ ನಡವಳಿಕೆಗಳ ಮೇಲೆ ನಿಯಂತ್ರಣಗಳನ್ನು ಹೇರುತ್ತಾ ಆಕೆಯನ್ನು ಹತೋಟಿಯಲ್ಲಿಟ್ಟು ಕೊಂಡಂತಹ ನೆಲೆಯು ಕಂಡುಬರುತ್ತದೆ.

'ಹೆಣ್ಣು: ಪರಂಪರೆ ಮತ್ತು ಆಧುನಿಕತೆ' ಹೆಣ್ಣನ್ನು ಪರಂಪರೆಯ ಮೌಲ್ಯಗಳು ಹೆಣ್ಣಿನ ಬದುಕನ್ನು ಕುಟುಂಬ ವಲಯಕ್ಕೆ ಮಾತ್ರ ಸೀಮಿತವಾಗಿರಿಸಿ ಆಕೆಗೆ ಶಿಕ್ಷಣವನ್ನು ನೀಡದೆ, ದುಡಿಮೆಗೆ ತೊಡಗಿಸುವರು. ನಂತರ ಆಧುನಿಕ ವಿಚಾರಗಳಿಂದ ವ್ಯಕ್ತಿಯ ವೈಚಾರಿಕ ಪ್ರಜ್ಞೆಯು ಬೆಳೆದು ಹೆಣ್ಣು ಎಂಬ ತಾತ್ಸಾರ ಹೋಗಲಾಡಿಸಿ ಸ್ವ ದುಡಿಮೆಯನ್ನು ಮಾಡುತ್ತಾ ಕೈಗಾರಿಕರಣದ ಸಂದರ್ಭದಲ್ಲಿ ದೇಸಿ ದುಡಿಮೆಗಳಲ್ಲಿ ತೊಡಗಿ ಬದುಕನ್ನು ನಡೆಸುವ ಛಲವಂತ ಮಹಿಳೆಯ ಸಂಗತಿಗಳು ಸಾರಾರವರ ಕಾದಂಬರಿಗಳಲ್ಲಿ ಮೂಡಿದ ಪರಿಯನ್ನು ಗುರುತಿಸಲಾಗಿದೆ.

'ಸಾರಾರವರ ಕಾದಂಬರಿಗಳಲ್ಲಿ ಇಸ್ಲಾಂ ಧರ್ಮದ ಮದುವೆಯ ಕಲ್ಪನೆ'ಯಲ್ಲಿ ಧರ್ಮದ ಹೆಸರಿನಲ್ಲಿ ಹೆಣ್ಣು ಪ್ರಾಯಕ್ಕೆ ಬರುವ ಮೊದಲೇ ಮದುವೆ ಮಾಡಿ ಕುಟುಂಬದ ಜವಾಬ್ದಾರಿಯನ್ನು ವಹಿಸಿ, ಎಲ್ಲಾರ ಸೇವೆಯನ್ನು ಮಾಡುತ್ತಾ ಜೀವನವನ್ನು ನಡೆಸುವಂತೆ ಮಾಡುವರು. ಮದುವೆಯ ಹೆಸರಿನಲ್ಲಿ ಹೆಣ್ಣಿನ ಕಡೆಯವರಿಂದ ಹಣವನ್ನು ಆಸ್ತಿಯ ರೂಪದಲ್ಲಿ ಕಸಿದುಕೊಂಡಿದಲ್ಲದೇ, ಆಕೆಗೆ ತಲಾಖ್ ನೀಡಿ ಬೇರೆ ಮದುವೆಯಾಗಿ ಆ ಹೆಣ್ಣಿನವರಿಂದಲೂ ಹಣವನ್ನು ಪಡೆದು, ಮದುವೆಯ ಹೆಸರಿನಲ್ಲಿ ಗಂಡು ತನಗೆ ಬೇಕಾದ ಹಾಗೆ ಸ್ವೇಚ್ಛೆಯಿಂದ ಸಮಾಜದಲ್ಲಿ ತಿರುಗುವನು. ಆದರೆ ಹೆಣ್ಣು ಸಮಾಜದಲ್ಲಿ ತಿರಸ್ಕಾರಕ್ಕೆ

ಒಳಗಾಗಿದ್ದಲ್ಲದೇ, ಕುಟುಂಬದ ವಲಯದಲ್ಲೂ ಸಹ ಆಕೆ ಎಲ್ಲರ ನಿಂದನೆಗಳಿಗೆ ಗುರಿಯಾಗಿ ಆಳಾಗಿ ತನ್ನ ಸಹೋದರರೊಂದಿಗೆ ಬದುಕನ್ನು ನಡೆಸುವ ಸ್ಥಿತಿಯನ್ನು ಗಮನಿಸಲಾಗಿದೆ.

'ಸಾರಾ ಅಬೂಬಕ್ಕರ್‌ರೊಂದಿಗಿನ ಸಾಹಿತ್ಯಿಕ ಸಾಂಸ್ಕೃತಿಕ ನೆಲೆ-ಸಂವಾದ' ದಲ್ಲಿ ಸಾರಾರವರ 'ಚಂದ್ರಗಿರಿ ತೀರದಲ್ಲಿ' , 'ಸಹನಾ' , 'ವಜ್ರಗಳು' ಕಾದಂಬರಿಗಳಿಗೆ ಸಂಬಂಧಿಸಿದ ವಿಚಾರಗಳಿಗೆ ಅವರೊಂದಿಗೆ ನಡೆಸಿದ ಸಂದರ್ಶನದ ವಿಷಯಗಳನ್ನು ಇದರಲ್ಲಿ ಕೇಂದ್ರಿಕರಿಸಲಾಗಿದೆ. ಮುಸ್ಲಿಂ ಸಮುದಾಯದ ನಿಯಮಗಳನ್ನು ಪುರುಷ ಪ್ರಧಾನ ಸಮಾಜವು ತಮಗೆ ಬೇಕಾದ ರೀತಿಯಲ್ಲಿ ರೂಪಿಸಿಕೊಂಡವು ಎಂಬ ಸಂಗತಿಗಳನ್ನು ಇಲ್ಲಿ ಗುರುತಿಸಲಾಗಿದೆ.

'ಚಂದ್ರಗಿರಿ ತೀರದಲ್ಲಿ' ಕಾದಂಬರಿಯಲ್ಲಿ ವೈಯಕ್ತಿಕ ಹಾಗೂ ಸಾಮಾಜಿಕ ಸಮಸ್ಯೆಗಳು ಮುಖಾಮುಖಿಯಾಗುತ್ತವೆ. ಬಡ ಮುಸ್ಲಿಂ ಮಹಿಳೆಯೊಬ್ಬಳ ಕಥೆಯ ಹಿನ್ನೆಲೆಯಲ್ಲಿ ಅವಳು ಬದುಕುವ ವಾತಾವರಣ, ಅವಳ ಅಸಹಾಯಕತೆ, ಸಮಾಜ ಅವಳ ಬಗ್ಗೆ ತೋರುವ ಕ್ರೌರ್ಯ, ಮೌನವಾಗಿ ಪ್ರತಿಭಟಿಸುವ ನಿರೂಪಿತ ವಿಷಯಗಳು ಕಂಡುಬರುತ್ತದೆ. ಚಂದ್ರಗಿರಿ ನದೀತೀರ ಮುಸ್ಲಿಂ ಸಮುದಾಯದ ಸಂಪ್ರದಾಯದ ಆಚಾರಣೆಗಳಿಗೆ ಸಂಕೇತವಾಗಿರುವುದು. ಈ ಸಂಪ್ರದಾಯ ನದಿಯನ್ನು ದಾಟಿ ಆ ತೀರದಲ್ಲಿದ್ದ ತನ್ನ ಪ್ರೀತಿಯ ಗಂಡನನ್ನು ತನ್ನ ಕರುಳ ಕುಡಿಯನ್ನು ಸೇರಲಾಗದೆ ಆಕೆ ಅಸಹಾಯಕಳಾಗಿರುವುದನ್ನು ಕಾಣಬಹುದಾಗಿದೆ.

'ಸಹನಾ' ಕಾದಂಬರಿಯಲ್ಲಿ ಬಹುಪತ್ನಿತ್ವದ ಅನಾವರಣಗೊಂಡ ಸಂಗತಿಗಳು ಕಂಡುಬರುವುದು. ಅನಾದಿಕಾಲದಿಂದ ಇಂದಿನವರೆಗೆ ನಡೆದುಕೊಂಡು ಬಂದಿರುವಂತಹ ಬಹುಪತ್ನಿತ್ವವು ಈ ಕಾದಂಬರಿಯ ಕಥಾ ವಸ್ತುವಾಗಿರುವುದು. ಹೆಣ್ಣು ಆರ್ಥಿಕವಾಗಿ ದುಡಿಮೆಯನ್ನು ಮಾಡಿದರೂ ಆಕೆಗೆ ಯಾವುದೇ ರೀತಿಯಲ್ಲೂ ಖರ್ಚನ್ನು ಮಾಡುವುದರಲ್ಲಿ ಹಕ್ಕು ಇರುವುದಿಲ್ಲ. ಹೆಣ್ಣಾದವಳು ಗಂಡನ, ಅತ್ತೆಯ ಸೇವೆಯನ್ನು ಮಾಡುತ್ತಾ ಬದುಕನ್ನು ನಡೆಸಬೇಕು. ಹೆಣ್ಣು ಸಹನಾಶೀಲಳಾಗಬೇಕು ಎಂಬ ವಿಚಾರಗಳನ್ನು ತುಂಬುತ್ತ ಆಕೆಯು ಮನೆಯಿಂದ ಹೊರನಡೆಯದಂತೆ ನಿಯಮಗಳನ್ನು ಹೇರುವುದು ಕಂಡುಬರುತ್ತದೆ. ಅಲ್ಲದೆ ಪಾಷಾನು ನಸೀಮಳಿಗೆ ತಲಾಖ್ ನೀಡದೆ, ಕೊನೆಯವರೆಗೂ ತನ್ನ ಅಧೀನದಲ್ಲಿಯೇ ಇರಬೇಕೆಂಬ ಅಧಿಕಾರವನ್ನು ಹೇರುವ ರೂಪವು ವ್ಯಕ್ತಗೊಳ್ಳುತ್ತದೆ. ಪುರುಷ ಪ್ರಧಾನ ಸಮಾಜದ ಮೇಲೆ ಹೊಮ್ಮಿದ ಆಕ್ರೋಶ ಹೊಂದಿ ಗಂಡನ ಹಿಡಿತದಿಂದ ಹೊರಬಂದು ಸ್ವ ದುಡಿಮೆಯನ್ನು ಮಾಡುತ್ತ ಬದುಕನ್ನು ನಡೆಸುವ ಮಾದರಿಯು ತಿಳಿಯುತ್ತದೆ.

'ವಜ್ರಗಳು' ಕಾದಂಬರಿಯಲ್ಲಿ ನಫೀಸಾಳ ಬದುಕಿನಲ್ಲಿ ತಲಾಖ್ ಎಂಬ ವಿಚ್ಛೇದನದಿಂದ ಆಕೆಯ ಬದುಕಿನಲ್ಲಿ ಎದುರಾದ ಸಂಗತಿಗಳು ಕಂಡುಬರುತ್ತದೆ. ಸಮಾಜದಲ್ಲಿ ಹಾಗೂ ಕುಟುಂಬ ವಲಯದಲ್ಲಿ ಎಲ್ಲರ ನಿಂದನೆಗಳಿಗೆ ಗುರಿಯಾಗಿ ಮಾನಸಿಕವಾಗಿ ಆಕೆ ಹಿಂಸೆಯನ್ನು ಅನುಭವಿಸುವ ತಳಮಳಗಳು ತಿಳಿಯುತ್ತವೆ. ಅಲ್ಲದೇ ಗಂಡಿನ ಅಧಿಕಾರದ ನೆಲೆಯು ಕುಟುಂಬದಲ್ಲಿ ಹೇಗೆ ರೂಪುಗೊಂಡಿದೆ ಎಂಬುದನ್ನು ಗುರುತಿಸಲಾಗಿದೆ. ಹುಸೈನನು ತಂಗಿಯಂದಿರನ್ನು ವಿನಾಕರಣ ಶಿಕ್ಷಿಸುವ, ಘೋಷದ ಹೆಸರಿನಲ್ಲಿ ಹೆಂಡತಿಗೆ ಕತ್ತಲಕೋಣೆಯನ್ನು ಖಾಯಂ ಆಗಿಸುವ, ಆಕೆಯನ್ನು ನಿರಂತರ ಬಸುರು ಬಾಣಂತನಗಳಲ್ಲಿ ಮುಳುಗಿಸುವ, ತಂದೆಯ ಅವಸಾನ ಕಾಲದಲ್ಲಿ ಅವರ ಇಚ್ಛೆಗೆ ವಿರುದ್ಧವಾಗಿ ಮೋಸದಿಂದ ಮಲತಾಯಿಗೆ ತಲಾಖ್ ನೀಡಿಸಿ ಆಕೆಯನ್ನು ನಿರ್ಗತಿಕಳನ್ನಾಗಿಸುವ ನೆಲೆಗಳಲ್ಲಿ ಅವನ ಅಟ್ಟಹಾಸ ಮೆರೆಯುವಂತಹ ಅಂಶಗಳನ್ನು ಗಮನಿಸಲಾಗಿದೆ.

ಪುರುಷ ಪ್ರಧಾನ ಸಮಾಜವು ಲಿಂಗತಾರತಮ್ಯ, ಲೈಂಗಿಕ ರಾಜಕಾರಣ, ಕೌಟುಂಬಿಕ ಚೌಕಟ್ಟು, ಬಹುಪತ್ನಿತ್ವ, ತಲಾಖ್ ಎಂಬ ನಿರ್ಬಂಧನೆಗಳ ಮೂಲಕ ಹೆಣ್ಣನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡು

ಆಕೆಯ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಸಿದುಕೊಂಡು ಮೌನವಾಗಿ ಎಲ್ಲಾವನ್ನು ಸಹಿಸಿಕೊಳ್ಳುವಂತೆ ಮಾಡಿತ್ತು. ಹೆಣ್ಣೆಂದರೆ ಬರೀ ಭೋಗದ ವಸ್ತು, ದುಡಿಯುವ ಯಂತ್ರದಂತೆ ಕಾಣುವ ಮನಸ್ಸುಗಳು ಈ ಸಮಾಜದಲ್ಲಿ ಇದ್ದಂತಹ ಬಗೆಯನ್ನು ಗುರುತಿಸಬಹುದಾಗಿದೆ. ಸಾರಾ ಅವರು ತಮ್ಮ ಕಾದಂಬರಿಗಳಲ್ಲಿ ಕೇಂದ್ರ ವಸ್ತುವಾಗಿ ಹೆಣ್ಣನ್ನು ದೃಷ್ಟಿಯಲ್ಲಿಟ್ಟುಕೊಂಡು ಮುಸ್ಲಿಂ ಸಮುದಾಯದ ಹೆಣ್ಣು ಅನುಭವಿಸುವ ದಬ್ಬಾಳಿಕೆ, ಶೋಷಣೆ, ಶಿಕ್ಷಣದಿಂದ ವಂಚಿತವಾಗಿರುವುದರಿಂದ ಆಕೆಗೂ ಸಹ ಸಾಂಸ್ಕೃತಿಕ ಕ್ಷೇತ್ರದಲ್ಲಿ ಬೆಳೆಯುವಂತಹ ಅವಕಾಶಗಳನ್ನು ಕಲ್ಪಿಸಬೇಕು ಎಂಬ ನಿಲುವುಗಳನ್ನು ಪಡೆದಿರುವುದು ಕಂಡುಬರುತ್ತದೆ.

"ಹೆಣ್ಣೊಂದು ಕಲಿತರೆ ಇಡೀ ಕುಟುಂಬವೇ ಕಲಿತಂತೆ" ಎಂಬ ಮಾತಿನಂತೆ ಶಿಕ್ಷಣವು ಹೆಣ್ಣಿನ ಪಾಲಿಗೆ ಎಷ್ಟು ಮುಖ್ಯವಾಗಿದೆ ಎಂಬುದಾಗಿ ತಿಳಿಯಬಹುದಾಗಿದೆ. ಕಲಿಕೆಯಿಂದ ಹೆಣ್ಣು ಪ್ರಾಪಂಚಿಕ ಜ್ಞಾನವನ್ನು ಪಡೆದು ಆಕೆಯು ಸಹ ತನ್ನ ಅಸ್ತಿತ್ವವನ್ನು ಬಲಪಡಿಸುವ ಪ್ರಸಂಗಗಳು ಇರುವುದನ್ನು ಗುರುತಿಸಬಹುದಾಗಿದೆ. ಮುಸ್ಲಿಂ ಸಮುದಾಯದ ಹೆಣ್ಣು ಮಕ್ಕಳು ಅಕ್ಷರ ಕಲಿಯಬೇಕು. ಅವರಿಗೂ ಸಹ ಸ್ವಾತಂತ್ರ್ಯಬೇಕು ಅನ್ನುವುದು ಸಾರಾರವರ ನಿಲುವಾಗಿದೆ. ಧಾರ್ಮಿಕತೆಯ ಹೆಸರಿನಲ್ಲಿ ನಡೆಯುವ ಹೆಣ್ಣು ಮಕ್ಕಳ ಶೋಷಣೆಯ ಕುರಿತು ಚಿಂತಿಸುವುದು ಅವರ ಮುಖ್ಯ ನೆಲೆಯಾಗಿದೆ. ಸಾರಾ ಅವರ ಕಾದಂಬರಿಯಲ್ಲಿ ಆಧುನಿಕತೆ ಶಿಕ್ಷಣದ ಪ್ರಭಾವದಿಂದಾಗಿ ಪರಂಪರೆಯನ್ನು ಮುರಿದು ಕಟ್ಟುವ ಪ್ರಯತ್ನವು ನಡೆದುಬಂದಿರುವುದನ್ನು ಗಮನಿಸಬಹುದಾಗಿದೆ.

ಒಟ್ಟಾರೆ ಜಾಗತೀಕರಣದ ಪ್ರವಾಹದಲ್ಲಿ ಕೊಚ್ಚಿ ಹೋಗುವ ಜನಸಮುದಾಯ ಮತ್ತು ಅವರ ಮೌಲ್ಯಗಳು, ಅವುಗಳು ಸೃಷ್ಟಿಸುವ ಕೋಮುಗಲಭೆಗಳು, ಧಾರ್ಮಿಕ ಆಚರಣೆ, ಸಿದ್ಧ ಮಾದರಿಯ ನಂಬಿಕೆಗಳು ಇವೆಲ್ಲವನ್ನು ಕಾದಂಬರಿಯಾಗಿಸಿ ವಿಸ್ತಾರಗೊಳಿಸಿದ ಸಾರಾ ಅವರ ಸೃಜನಶೀಲತೆ, ವೈಚಾರಿಕ ಚಿಂತನೆಯ ಅನನ್ಯತೆ ಶೋಧಿಸುವ ಪ್ರಯತ್ನವನ್ನು ಮಾಡಲಾಗಿದೆ.

## ಪರಾಮರ್ಶನ ಗ್ರಂಥಗಳು


1. ಅಗ್ರಹಾರ ಕೃಷ್ಣಮೂರ್ತಿ (ಸಂ) : ಸಂಸ್ಕೃತಿ ಕಥನ
   ಕನ್ನಡ ಪುಸ್ತಕ ಪ್ರಾಧಿಕಾರ, 2002.

2. ಆರ್ಯಾಂಭ ಪಟ್ಟಾಭಿ (ಸಂ) : ಮಹಿಳಾ ಸಾಹಿತ್ಯ ಸಮೀಕ್ಷೆ
   ಸಂವಹನ ಪ್ರಕಾಶನ, 2004.

3. ಆಶಾದೇವಿ ಎಂ.ಎಸ್ : ಸ್ತ್ರೀಮತ ವನುತ್ತರಿಸಲಾಗದೆ?
   ಅಕ್ಷರ ಪ್ರಕಾಶನ ಹೆಗ್ಗೋಡು ಸಾಗರ, 2005.

4. ಇಂದಿರ ಆರ್ : ಮಹಿಳೆ ಸಮಾಜ ಸಂಸ್ಕೃತಿ
   ಪ್ರಸಾರಂಗ ಕ.ವಿ.ವಿ. ಹಂಪಿ, 2002.

5. ಉಷಾ ಪಿ.ರೈ (ಸಂ) : ಲೇಖ–ಲೋಕ4
   ಕರ್ನಾಟಕ ಲೇಖಕಿಯರ ಸಂಘ
   ಬೆಂಗಳೂರು, 2003.

6. ಉಷಾ ಎಂ : ಮಹಿಳಾ ಮತ್ತು ಜಾತಿ ಒಂದು ಸೈದ್ಧಾಂತಿಕ ಗ್ರಹಿಕೆ
   ಪ್ರಸಾರಂಗ ಕ.ವಿ.ವಿ. ಹಂಪಿ, 2005.

7. ಉಷಾ ಎಂ : ಆಧುನಿಕ ಮಹಿಳಾ ಸಾಹಿತ್ಯ ಇನ್ನಷ್ಟು ಪುಟಗಳು
   ಪ್ರಸಾರಂಗ ಕ.ವಿ.ವಿ. ಹಂಪಿ, 2007.

8. ಕವಿತಾ ರೈ ಬಿ.ಆರ್ : ಮಹಿಳೆ : ಅಸ್ತಿತ್ವದ ಸಂಕಥನ–ಒಂದು ಪರಿಕಲ್ಪನಾತ್ಮಕ ಅಧ್ಯಯನ
   ಸಿವಿಜಿ ಪ್ಲಬ್ಲಿಕೇಷನ್ಸ್ ಬೆಂಗಳೂರು, 2005.

9. ಕೇಶವ ಶರ್ಮ ಕೆ : ಸ್ತ್ರೀವಾದಿ ಚಿಂತನೆಗಳು (ಸಂ) ಡಾ.ಹಾ.ಮ ನಾಗಾರ್ಜುನ
   ದೇಸಿ ಪುಸ್ತಕ ಬೆಂಗಳೂರು, 2010.

10. ಗೀತಾ ಪ್ರಸಾದ್ : ಆಧುನಿಕ ಮಹಿಳಾ ಅಭಿವ್ಯಕ್ತಿ
    ಧಾತ್ರಿ ಪುಸ್ತಕ ಬೆಂಗಳೂರು, 2009.

11. ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ (ಸಂ) : ಸ್ತ್ರೀವಾದಿ ಸಾಹಿತ್ಯ ವಿಮರ್ಶೆ
    ಕ್ರೈಸ್ಟ್ ಕಾಲೇಜು ಬೆಂಗಳೂರು, 1994.

12. ನೇಮಿಚಂದ್ರ : ಮಹಿಳಾ ಅಧ್ಯಯನ
    ಅಂಕಿತ ಪುಸ್ತಕ ಪ್ರಕಾಶನ, 2011.

13. ಪ್ರಭಾಮಣಿ : ಮಹಿಳೆ ಮತ್ತು ಧರ್ಮ
ಕನ್ನಡ ಸಾಹಿತ್ಯ ಪರಿಷತ್, 2002.

14. ಪ್ರೇಮಾ ಸಿರ್ಸೆ : ಮಹಿಳೆ, ಸಮಾಜ ಮತ್ತು ಸವಾಲುಗಳು
ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು, 2006.

15. ಭೈರಪ್ಪ ಕೆ ಎಂ. ಎ : ಭಾರತೀಯ ಸಮಾಜ
ಕೇಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ ಪ್ರಕಾಶನ, 1997.

16. ಬಿದಿರಿ ಚಂದ್ರಕಲಾ : ಮಹಿಳಾ ಬದುಕು
ತನುಮನ ಪ್ರಕಾಶನ ಮೈಸೂರು, 2009.

17. ಮಂಗಳಾ ಪ್ರಿಯದರ್ಶಿನಿ ಡಿ : ಆಧುನಿಕ ಕನ್ನಡ ಕಾವ್ಯದ ಸ್ವರೂಪ
ಪ್ರಸಾರಂಗ ಬೆಂ.ವಿ.ವಿ. 2004.

18. ಮಂಗಳಾ ಚಿ.ನ : ಎಚ್ಚೆತ್ತ ಹಾದಿಯಲ್ಲಿ ಮಹಿಳೆ
ಪ್ರಸಾರಂಗ ಬೆಂ.ವಿ.ವಿ, 2001.

19. ಮೀರಾ ಎಲ್.ಜಿ : ಸ್ತ್ರೀ ಸಂವೇದನೆಯಲ್ಲಿ ಕನ್ನಡ ಕಥನ
ಶಕ್ತಿ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಬೆಂಗಳೂರು, 2004.

20. ಮುಕ್ತಾಯಕ್ಕ ಎಚ್.ಎಸ್ : ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ
ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು, 1997.

21. ಮೂರ್ತಿಶ್ವರಯ್ಯ ಬೆ.ಕಾ : ಮಹಿಳೆ ಸಮಾಜ ಮತ್ತು ಕಾನೂನು
ಸ್ವಪ್ನ ಬುಕ್ ಹೌಸ್, 2002.

22. ಲೀಲಾವತಿ ಎಂ : ಮೂಢನಂಬಿಕೆ ಮತ್ತು ಮಹಿಳೆ
ಕನ್ನಡ ಸಾಹಿತ್ಯ ಪರಿಷತ್, 2000.

23. ವಿಜಯಶ್ರೀ ಸಬರದ : ಮಹಿಳೆ ಶೋಷಣೆ–ಸವಾಲುಗಳು
ಪ್ರಸಾರಂಗ ಗುಲ್ಬರ್ಗ ವಿ.ವಿ, 2005.

24. ವಿಜಯದಬ್ಬೆ : ನಾರಿ: ದಾರಿ – ದಿಗಂತ
ರಚನಾ ಪ್ರಕಾಶನ, 1997.

25. ಡಾ. ಸಬೀಹಾ (ಸಂ) : ಚಂದ್ರಗಿರಿ
ಸಿರಿವರ ಪ್ರಕಾಶನ ಬೆಂಗಳೂರು, 2009.

26. ಸಾರಾ ಅಬೂಬಕ್ಕರ್ : ಲೇಖನ ಗುಚ್ಛ
ಚಂದ್ರಗಿರಿ ತೀರದಲ್ಲಿ ಪ್ರಕಾಶನ, 1997.

27. ಸುಮಿತ್ರಾಬಾಯಿ ಬಿ.ಎನ್ : ಸ್ತ್ರೀವಾದ
ಕರ್ನಾಟಕ ಸಾಹಿತ್ಯ ಅಕಾಡೆಮಿ, 2006.

28. ಸುಜ್ಞಾನ ಮೂರ್ತಿ (ಅನು) : ನಮಗೆ ಗೋಡೆಗಳಿಲ್ಲ
ಲಡಾಯಿ ಪ್ರಕಾಶನ ಗದಗ, 2009.

29. ಡಾ. ಶೀಲಾದೇವಿ ಎಸ್. ಮಳೀಮಠ : ವಚನ ಮತ್ತು ಸಮೂಹ ಸಂವಹನ
ಬೆನಾರಸ್ ಹಿಂದೂ ವಿಶ್ವವಿದ್ಯಾಲಯ ವಾರಣಾಸಿ
(ಪಿ.ಎಚ್.ಡಿ ಮಹಾಪ್ರಬಂಧ)

30. ಶ್ರೀಮತಿ ಎಚ್.ಎಸ್(ವಿವಿಧ ಲೇಖಕರು) : ಕನ್ನಡ ಸಾಹಿತ್ಯ ಮತ್ತು ಸ್ತ್ರೀವಾದಿ ಚಿಂತನೆ
ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು.

31. ಶ್ರೀಮತಿ ಎಚ್.ಎಸ್ : ಚಹರೆ
ಇಳಾ ಪ್ರಕಾಶನ ಬೆಂಗಳೂರು, 1999.

32. ಶ್ರೀಮತಿ ಎಚ್. ಎಸ್ : ಕನ್ನಡ ಮಹಿಳೆ ಮತ್ತು ಸ್ವಾತಂತ್ರ್ಯ ಹೋರಾಟ
ಪ್ರಸಾರಂಗ ಕ.ವಿ.ವಿ ಹಂಪಿ, 1999.

33. ಶ್ರೀಮತಿ ಎಚ್. ಎಸ್ : ಮಹಿಳಾ ಅಧ್ಯಯನ, ಸಂ–4 ಸಂಚಿಕೆ–1
ಪ್ರಸಾರಂಗದ ಕ.ವಿ.ವಿ ಹಂಪಿ,2002.

34. ಶ್ರೀಮತಿ ಎಚ್.ಎಸ್ : ಕನ್ನಡ ಮಹಿಳಾ ಸಾಹಿತ್ಯ ಚರಿತ್ರೆ
ಪ್ರಸಾರಂಗ ಕ.ವಿ.ವಿ ಹಂಪಿ, 2006.

35. ಶ್ರೀಮತಿ ಎಚ್.ಎಸ್,
ಶಿವಾನಂದ ಎಸ್ ವಿರಕ್ತಮಠ, ಕೃಷ್ಣ ಜೆ (ಸಂ) : ಮಹಿಳೆ ದುಡಿಮೆ ಮತ್ತು ಬಿಡುವು
ಮಹಿಳಾ ಅಧ್ಯಯನ ಕೇಂದ್ರ ಕ.ವಿ.ವಿ ಹಂಪಿ,
2007.

36. ಶ್ರೀಮತಿ ಎಚ್.ಎಸ್ : ಸಿಮೋನ್ ದಿ ಬೋವಾ 'ದ ಸೆಕೆಂಡ್ ಸೆಕ್ಸ್'
ಅಧ್ಯಯನ ಮಂಡಲ ಬೆಂಗಳೂರು, 2007.

37. ಶೈಲಜ ಹಿರೇಮಠ : ಸ್ತ್ರೀ ಕಥನ
ಭುವನ ಪ್ರಕಾಶನ ಹೊಸಪೇಟೆ ವಿದ್ಯಾರಣ್ಯ, 2003.

38. ಡಾ. ಶಾಂತಾ ಇಮ್ರಾಪೂರ : ಮಹಿಳೆ ಸಾಹಿತ್ಯ ಸಂಸ್ಕೃತಿ
ಚೇತನಾ ಪ್ರಕಾಶನ ಧಾರವಾಡ, 2001.

39. ಷರೀಫಾ ಕೆ, ಬಸವರಾಜ ಸೂಳೀಬಾವಿ (ಸಂ) : ಮಹಿಳಾ ಮಾರ್ಗ
ಲಡಾಯಿ ಪ್ರಕಾಶನ ಗದಗ, 2010.

40. ಡಾ. ಹೇಮಲತಾ ಎಚ್. ಎಂ : ಮಹಿಳಾ ಅಧ್ಯಯನ, 2009